# ವಿಮರ್ಶೆ

೩

ಮಾಸ್ತಿ ವೆಂಕಟೇಶ ಐಯಂಗಾರ್



ಬೆಲೆ ೧ ರೂಪಾಯಿ

# ಮುನ್ನುಡಿ

ವಿಮರ್ಶೆಯೆಂಬ ಹೆಸರಿನಿಂದ ನಾನು ಪ್ರಕಟಿಸಿರುವ ಪುಸ್ತಕಗಳಲ್ಲಿ ಇದು ಮೂರನೆಯದು. ಮೊದಲು ಈ ಲೇಖನಸಂಗ್ರಹಕ್ಕೆ ಬೇರೆ ಒಂದು ಹೆಸರನ್ನು ಕೊಡೋಣವೆಂದಿದ್ದೆನು. ಆಮೇಲೆ ಹಾಗೆ ಮಾಡುವುದು ಅನವಶ್ಯಕವೆಂದು ತೋರಿತು. ಇಲ್ಲಿ ಬರುವ ವಿಷಯ ಯಾವುದೂ ವಿಮರ್ಶೆಯ ಉದಾರ ವ್ಯಾಪ್ತಿಯಿಂದ ಹೊರಗೆ ನಿಲ್ಲಬೇಕಾದದ್ದಿಲ್ಲ.

ಈ ಲೇಖನಗಳಲ್ಲಿ ಪೂಜಿತರಾಗಿರುವ ನಾಲ್ವರು ಮಹನೀಯರು ಬೇರೆ ಬೇರೆ ದೇಶಕಾಲಗಳಿಗೆ ಸೇರಿದವರು. ಆದರೂ ಅವರೆಲ್ಲ ನಮ್ಮವರೇ ಮತ್ತು ಈಗ ನಮಗೆ ಬೇಕಾದವರೇ. ಇದನ್ನು ನಮ್ಮ ಜನ ಗುರುತಿಸುವರೆಂದು ನನ್ನ ನಂಬಿಕೆ. ಮುಕ್ತಾತ್ಮರು ಆನಂದ ಲೋಕಗಳಲ್ಲಿ ಒಬ್ಬರನ್ನೊಬ್ಬರು ಸಂಧಿಸುವುದಾದರೆ ನಮ್ಮ ಪೂರ್ವಾಚಾರ್ಯರುಗಳೂ ಈ ಮತ್ತು ಇಂಥ ಇತರ ಮಹನೀಯರೂ ಅಲ್ಲಿ ಒಬ್ಬರನ್ನೊಬ್ಬರು ಪ್ರೇಮದಿಂದಲೂ ಗೌರವ ದಿಂದಲೂ ಕಾಣುವರೆಂದು ಊಹಿಸಬಹುದು. ಈ ಮಾತು ಹೆಚ್ಚಾಯಿ ತೆಂದು ಯಾರಿಗಾದರೂ ಕಂಡರೆ ಇದು ತತ್ತ್ವ ಪ್ರತಿಪಾದನಕ್ಕಾಗಿ ಹೇಳಿದ್ದಲ್ಲ ವೆಂದು ತಿಳಿದು ಪ್ರಾಜ್ಞರು ಮನ್ನಿಸಬೇಕು.

ಕಾಲದೇಶಗಳಲ್ಲಿ ಹೇಗೋ ಹಾಗೆ ವ್ಯವಹಾರದ ಅಂತಸ್ತುಗಳಲ್ಲಿಯೂ ಇವರಿವರ ಮಧ್ಯದ ಅಂತರ ದೊಡ್ಡದು. ಆದರೆ ಆಧ್ಯಾತ್ಮಿಕ ಸಂಬಂಧ ಆ ಅಂತರವನ್ನು ತೊಡೆಯುತ್ತದೆ. ಎಪಿಕ್ಟಿಟಸನು ಬಿಡುಗಡೆ ಹೊಂದಿದ ದಾಸನು. ಚಕ್ರವರ್ತಿಯಾದ ಮಾರ್ಕಸ್ ಅವನನ್ನು ಗುರುವರ್ಗದಲ್ಲಿ ಸೇರಿಸಿ ಕೊಂಡನು; ಅವನ ಶಿಷ್ಯವರ್ಗದಲ್ಲಿ ಸೇರಿರಲು ಬಹಳ ಪ್ರಯತ್ನ ಮಾಡಿ ದನು. ಎಪಿಕ್ಟಿಟಸನು ತೀರಿಹೋದಾಗ ಅವನ ಉಪದೇಶವನ್ನು ಕೇಳಿದ್ದ ಶ್ರೀಮಂತನೊಬ್ಬನು ಸಾವಿರ ಹೊನ್ನು ಕೊಟ್ಟು ಅವನ ಮಣ್ಣಿನ ಹಣತೆ ಯನ್ನು ಕೊಂಡುಕೊಂಡನಂತೆ; ಅದ್ಭುತಜೀವಿಯಾದ ಆ ಮುದುಕನು ಉಪಯೋಗಿಸಿದ್ದ ದೀಪದ ಬೆಳಕಿನಲ್ಲಿ ಓದಿದರೆ ಅವನ ಜ್ಞಾನದಲ್ಲಿ ಸ್ವಲ್ಪ ವಾದರೂ ತನಗೆ ಬರಬಹುದೇನೋ ಎಂದು ಆಸೆ ಎಂಬದಾಗಿ ಆತನು ಕಾರಣ

ಹೇಳಿದನು. ಕ್ರೈಸ್ತಮತಗಳಲ್ಲಿ ಗುರುವಾಗಿದ್ದ ಅಗಸ್ಟೀನ್ ಸಾಧು ಎಪಿಕ್ಟಿಟಸನಿಗೆ ಮುಕ್ತಿ ದೊರೆಯಲಿ ಎಂದು ಪ್ರಾರ್ಥಿಸಿದನಂತೆ. ಕ್ರೈಸ್ತನಲ್ಲದವನಿಗೆ ಇದನ್ನು ಸಾಧ್ಯವೆನ್ನುವುದಾಗಲಿ ಸಾಧ್ಯವಾಗಲೆನ್ನುವುದಾಗಲಿ ಆಗಣ, ಪ್ರಾಯಶಃ ಈಗಣ, ಕ್ರೈಸ್ತಭಾವನೆಗೆ ವಿರೋಧ. ಎಷ್ಟು ಹೇಳಿದರೂ ಸ್ವರ್ಗದಲ್ಲಿ ಒಂದು ಹೊಲಗೇರಿ ಇರಬೇಕೆಂಬ ಭಾವನೆ ನಮ್ಮ ಮನಸ್ಸಿನಿಂದ ಹೋಗುವುದಿಲ್ಲ. ಈ ತೊಡಕು ಎಲ್ಲ ಮತಗಳ ಸಂಪ್ರದಾಯದಲ್ಲಿಯೂ ತಲೆಯೆತ್ತಿಯೇ ಇದೆ. ಇಂಥದರಲ್ಲಿ ಎಪಿಕ್ಟಿಟಸನಿಗೆ ಮುಕ್ತಿಯನ್ನು ಬೇಡಬೇಕಾದರೆ ಅಗಸ್ಟೀನ್ ಸಾಧುವಿಗೆ ಅವನ ಮೇಲೆ ಎಷ್ಟು ಭಕ್ತಿ ಗೌರವ ಇದ್ದುವೆಂದು ತೋರುತ್ತದೆ. ಡೇವಿಡ್ ಮಹಾರಾಜನು ಅಗಸ್ಟೀನನ ಮತದ ಪೂರ್ವಚರಿತ್ರೆಯ ಮಹಾಪುರುಷನು. ಹೀಗೆ ಈ ನಾಲ್ವರಿಗೆ ಆಧ್ಯಾತ್ಮಿಕವಾಗಿ ಗಾಢವಾದ ಸಂಬಂಧವಿದೆ.

ಅಚ್ಚಿನಲ್ಲಿ ಕೆಲವು ತಪ್ಪುಗಳು ನಿಂತಿವೆ. ಐವತ್ತೆರಡನೆಯ ಪುಟದ ಮಧ್ಯೆ ಚಕ್ರವರ್ತಿಗೆ ತೋರದ ಎಂದಿರುವುದಕ್ಕೆ ಪ್ರತಿಯಾಗಿ ತೋರಿದ ಎಂದಿರುವುದೂ, ತೊಂಬತ್ತೈದನೆಯ ಪುಟದ ಎರಡನೆಯ ವಾಕ್ಯವೃಂದದಲ್ಲಿ ನನ್ನನ್ನು ನಾಚಿಸಿದೆ ಎನ್ನುವುದಕ್ಕೆ ಪ್ರತಿಯಾಗಿ ನಂಬಿಸಿದೆ ಎಂದಿರುವುದೂ ಅರ್ಥವನ್ನೇ ತಪ್ಪಿಸುತ್ತವೆ. ಇನ್ನು ಇಂಥ ತಪ್ಪುಗಳು ಇರಲಾರವೆಂದು ನಂಬಿದೇನೆ; ಆದರೆ ಹೇಳುವಂತಿಲ್ಲ. ಹದಿನೈದನೆಯ ಪುಟದಲ್ಲಿ ಕೊನೆಗಳನ್ನು ಎನ್ನುವುದಕ್ಕೆ ಪ್ರತಿಯಾಗಿ ಕೊನೆಯನ್ನು ಎಂದಿರುವುದು ; ಅರವತ್ತೆರಡನೆಯ ಪುಟದಲ್ಲಿ ಕೆಲವು ಕೆಲಸಗಳನ್ನು ಮಾತ್ರ ಇರಿಸಿಕೊ ಎಂಬಲ್ಲಿ ಅಲ್ಪವಿರಾಮಕ್ಕೆ ಪ್ರತಿಯಾಗಿ ಪೂರ್ಣವಿರಾಮ ಬಿದ್ದಿರುವುದು ; ಇಂತವು ಇನ್ನೆಷ್ಟು ತಪ್ಪೋ! ಈ ಎಲ್ಲ ಅಜಾಗ್ರತೆಯನ್ನು ಕ್ಷಮಿಸಬೇಕೆಂದು ಓದುವವರನ್ನು ನಾನು ಪ್ರತ್ಯೇಕವಾಗಿ ಬೇಡಬೇಕಾಗಿಲ್ಲ. ಗ್ರಂಥಕರ್ತನ ತಪ್ಪು ಇಷ್ಟರಲ್ಲಿ ಮುಗಿಯುವುದಿಲ್ಲ. ಓದುವವರು ಕ್ಷಮಾವಂತರೆಂಬ ಧೈರ್ಯವಿರುವುದರಿಂದಲೇ ಬರೆಯುವವನಿಗೆ ಮರಳಿ ಮರಳಿ ತನ್ನ ಕೆಲಸದಲ್ಲಿ ತೊಡಗುವುದು ಸಾಧ್ಯವಾಗಿರುವುದು.

ಬೆಂಗಳೂರು, ಆಂಗೀರಸ ಸಂ॥<br>ಫಾಲ್ಗುಣ ಬಹುಳ ತ್ರಯೋದಶಿ.

ಮಾಸ್ತಿ ವೆಂಕಟೇಶ ಐಯಂಗಾರ್.

# ವಿಷಯ ಸೂಚಿ

## ಶ್ರೀನಿವಾಸ ರಚಿತ

---

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ಣಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)

---

# ಡೇವಿಡ್ ಮಹಾರಾಜನ ಕೀರ್ತನೆಗಳು

೧

ಕರ್ಣಾಟಕದ ವೈಷ್ಣವ ದಾಸರ ಕೀರ್ತನೆಗಳನ್ನು ಕುರಿತು ನಾನು ಹಿಂದೆ ಬರೆದ ಒಂದು ಉಪನ್ಯಾಸದಲ್ಲಿ ಯೇಹೂದ್ಯರ ಸಾಹಿತ್ಯದಲ್ಲಿ ಇದೇ ರೀತಿಯ ಭಕ್ತಿಗೀತೆಗಳಿವೆಯೆಂದು ಸೂಚಿಸಿದೆನು. ಸ್ವಲ್ಪಮಟ್ಟಿಗಾದರೂ ಆ ಗೀತೆಗಳ ಪರಿಚಯವನ್ನು ನಮ್ಮ ಜನರಿಗೆ ಮಾಡಿಕೊಡುವುದಕ್ಕೋಸ್ಕರ ಅವುಗಳಲ್ಲಿ ಸೇರಿರುವ ಡೇವಿಡ್ ಮಹಾರಾಜನ ಕೃತಿಗಳನ್ನು ಕುರಿತು ಈ ಉಪನ್ಯಾಸವನ್ನು ಬರೆಯಲು ತೊಡಗಿದೇನೆ. ಈ ರೀತಿಯ ಗೀತೆಗಳೆಲ್ಲ ಯೇಹೂದ್ಯರ ಮತಗ್ರಂಥಗಳಲ್ಲಿ ಒಂದು ಖಂಡವಾಗಿ ಏರ್ಪಟ್ಟಿವೆ. ಕ್ರೈಸ್ತ ಮತದವರು Old Testament ಎಂದರೆ ಹಳೆಯ ಒಡಂಬಡಿಕೆ ಅಥವಾ ಕರಾರು ಎಂದು ಕರೆಯುವ ಗ್ರಂಥಸಮುಚ್ಚಯವೇ ಯೇಹೂದ್ಯರ ಈ ಮತಗ್ರಂಥಗಳೆನ್ನುವುದು. ಅವುಗಳಲ್ಲಿ ಕೀರ್ತನೆಗಳು ಎನ್ನುವುದು ಒಂದು ಭಾಗ. ಅದರಲ್ಲಿ ಬಹು ಮುಖ್ಯವಾದ ಭಾಗ ಡೇವಿಡ್ ಮಹಾರಾಜನಿಂದ ರಚಿತವಾದದ್ದು. ಇಂಥ ಕೃತಿಗಳನ್ನು ರಚಿಸಿದವರಲ್ಲಿ ಈ ಜನಾಂಗದಲ್ಲಿ ಇವನೇ ಪ್ರಮುಖನೆಂದು ತೋರುತ್ತದೆ. ಇವು ಯೇಹೂದ್ಯ ಭಾಷೆಯಲ್ಲಿ ಹಾಡುವ ಕಾವ್ಯಗಳಾಗಿವೆಯೆಂದು ಕಾಣುತ್ತದೆ. ಕ್ರೈಸ್ತ ಮತ ಗ್ರಂಥಗಳು ಯೂರೋಪಿನ ದೇಶಭಾಷೆಗಳಿಗೆ ಭಾಷಾಂತರವಾದ ಕಾಲದಲ್ಲಿ ಇಂಗ್ಲೆಂಡ್ ದೇಶದಲ್ಲಿ ರಾಜಾಜ್ಞೆಯಿಂದ ಈ ಗೀತೆಗಳು ಪರಿವರ್ತಿಸಲ್ಪಟ್ಟುವು. ಇದಾಗಿ ಈಗ ಸುಮಾರು ಇನ್ನೂರು ವರ್ಷದಮೇಲೆ ಆಗಿದೆ. ಭಾಷಾಂತರವು ಗದ್ಯರೂಪದಲ್ಲಿದ್ದರೂ ಭಾಷೆ ಸುಂದರವಾಗಿದ್ದು ಶೈಲಿ ಕಾವ್ಯದ ಛಾಯೆಯನ್ನು ಅನುಸರಿಸಿರುವುದರಿಂದ ಈ ಗೀತೆಗಳು ಇಂಗ್ಲಿಷಿನಲ್ಲಿಯೂ ಮನೋಹರವಾಗಿವೆ.

ಯೇಹೂದ್ಯ ಜನಾಂಗದವರು ಭಗವಂತನನ್ನು ಯೆಹೋವಾ ಎಂದು ಕರೆಯುತ್ತಿದ್ದರು. ಅವನು ತಮ್ಮ ಜನಾಂಗವನ್ನು ಆರಿಸಿ ತೆಗೆದುಕೊಂಡು ತಮ್ಮ ಸಂಗಡ ಕರಾರು ಒಡಂಬಡಿಕೆಗಳನ್ನು ಮಾಡಿಕೊಂಡಂತೆಯೂ, ತಮ್ಮ ಯೋಗಕ್ಷೇಮವನ್ನು ಅಗತ್ಯದಿಂದ ನೋಡಿಕೊಳ್ಳುತ್ತಿದ್ದಂತೆಯೂ ಒಂದು ಭಾವನೆ ಅವರಲ್ಲಿ ವಾಡಿಕೆಯಾಗಿತ್ತು. ಅವನ ಇಚ್ಛೆಗೆ ಸರಿಯಾಗಿ ನಡೆದುಕೊಂಡಷ್ಟು ಕಾಲ ಅವನು ರಕ್ಷಿಸುತ್ತಿರುವನೆಂದೂ ವಿರೋಧವಾಗಿ ನಡೆದರೆ ಕೋಪಗೊಂಡು ಶಿಕ್ಷಿಸುವನೆಂದೂ ಅವರಿಗೆ ಸ್ಥಿರವಾದ ನಂಬಿಕೆ. ಆ್ಯಡಂ ಎಂಬ ಆದಿ ಮಾನವನು ಮೊದಲಾಗಿ ಇವರ ಮೂಲಪುರುಷನಾದ ಏಬ್ರಹಂ, ಅವನ ಕುಲದವರು ಐಸಾಕ್, ಜೇಕಬ್, ಜೋಸೆಫ್ ಇವರ ಚರಿತ್ರೆಗಳಲ್ಲಿಯೂ ಆಮೇಲಣ ಜನಾಂಗದ ಚರಿತ್ರೆಯಲ್ಲಿಯೂ ಎಲ್ಲ ಕಾಲದಲ್ಲೂ ಜನದಲ್ಲಿ ಈ ಭಾವನೆ ನೆಲಸಿತ್ತೆಂದು ಕಾಣುತ್ತದೆ. ಈ ಕಾರಣದಿಂದ ಇವರಿಗೆ ಯೆಹೋವನು ಬಹು ಸಮೀಪದ ಬಹು ನಿಜವಾದ ರಾಜಾಧಿರಾಜನಂತೆ ಆಗಿದ್ದನು. ಈಗ ನಮ್ಮಲ್ಲಿ ತಿರುಪತಿಯ ವೆಂಕಟರಮಣಸ್ವಾಮಿಯ ವಿಷಯದಲ್ಲಿ ಹರಕೆಯನ್ನು ನಡೆಸದೇ ಇದ್ದರೆ ಶಿಕ್ಷೆ ಮಾಡುತ್ತಾನೆ ಹೇಳಿದಂತೆ ನಡೆದುಕೊಳ್ಳುತ್ತಿದ್ದರೆ ಕಾಪಾಡುತ್ತಾನೆ ಎಂಬ ನಂಬಿಕೆಯು ಅನೇಕ ಜನರಲ್ಲಿ ಇರುವಂತೆ ಈ ಯೇಹೂದ್ಯ ಜನರಲ್ಲಿ ಯೆಹೋವನ ವಿಷಯದಲ್ಲಿ ಇತ್ತೆಂದು ಕಾಣುತ್ತದೆ. ಜನಾಂಗದ ಈ ಭಾವನೆಯೂ ಇದರ ಫಲವಾದ ಸಂಸ್ಕಾರವೂ ಡೇವಿಡ್ ಮಹಾರಾಜನ ಕೀರ್ತನೆಗಳಲ್ಲಿ ರೂಪುಗೊಂಡಿವೆ.

ಈ ಮಹನೀಯನ ಜೀವನವು ವಿಚಿತ್ರವಾದುದು. ಇವನ ತಂದೆ ಕುರಿಯ ಹಿಂಡುಗಳನ್ನು ಸಾಕುತ್ತಿದ್ದ ಒಬ್ಬ ಗ್ರಾಮವಾಸಿ. ಇವನಿಗೆ ಅಣ್ಣಂದಿರು ಆರ್ವರು. ಈತನು ಸ್ಫುರದ್ರೂಪಿಯಾಗಿದ್ದನೆಂದು ಕಾಣುತ್ತದೆ. ಇವನ ಚಿಕ್ಕಂದಿನಲ್ಲಿ ಯೇಹೂದ್ಯರ ರಾಜನಾಗಿದ್ದ ಸಾಲನಿಗೆ ಬುದ್ಧಿ ಭ್ರಮಿಸಿ ಜನರಿಗೆ ಅವನಲ್ಲಿ ವಿಶ್ವಾಸ ಕಡಿಮೆಯಾಯಿತು. ಮುಖ್ಯ ಗುರುವಾದ ಸಾಮ್ಯುಯಲಿಗೆ ದಿವ್ಯಜ್ಞಾನದಿಂದ ಡೇವಿಡ್ ಮುಂದಣ ರಾಜನೆಂದು ತಿಳಿಯಿತು. ಅವನು ಬಂದು ಇವನನ್ನು ಕರೆಸಿ ನೋಡಿ ಯೇಹೂದ್ಯರ ಮುಂದಣ ರಾಜನೆಂದು ಪಟ್ಟಗಟ್ಟಿದನು. ರಾಷ್ಟ್ರದ ಶತ್ರುಗಳಾದ ಫಿಲಿಸ್ಟೈನ್ ಜನರೊಂದಿಗೆ ಯುದ್ಧ ಮಾಡುವುದರಲ್ಲಿ ಡೇವಿಡ್ ಅತಿಶಯವಾದ

ಕೌಶಲ್ಯವನ್ನು ತೋರಿ ಅವರ ಕಡೆಯ ಹಿಡಿಂಬನಾದ ಗೋಲಿಯತ್ ಎಂಬವನನ್ನು ನಿಗ್ರಹಿಸಿ ಹೆಸರು ಸಂಪಾದಿಸಿದನು. ಸಾಲ್ ಮಹಾರಾಜನು ಇವನಿಗೆ ಮಗಳನ್ನು ಕೊಟ್ಟು ಮದುವೆ ಮಾಡಿದನು. ಇವನಿಗೂ ಸಾಲನ ಮಗ ಜೊನಾಥನನಿಗೂ ಬಹಳ ಪ್ರೇಮ ಬೆಳೆಯಿತು. ಆದರೆ ಸಾಲನು ಇವನನ್ನು, ಮುಂದಣ ರಾಜನೆಂಬ ಕಾರಣದಿಂದ ಇರಬಹುದು, ಅಸೂಯೆಯಿಂದ ಕಾಣುತ್ತಿದ್ದನು. ರಾಜನ ಆಗ್ರಹಕ್ಕೆ ಪಾತ್ರನಾಗಿ ಡೇವಿಡ್ಡನು ತಲೆತಪ್ಪಿಸಿಕೊಂಡು ಓಡಿಯಾಡಬೇಕಾಯಿತು. ಹೀಗಿರುತ್ತ ಈತನು ಅರ್ಧರಾಷ್ಟ್ರವನ್ನು ತನ್ನದಾಗಿ ಮಾಡಿಕೊಂಡನು. ಜೊನಾಥನನ ಸಹಾಯದಿಂದ ಒಂದೊಂದು ಸಲ ಇವನು ಅರಮನೆಗೆ ಹೋಗುತ್ತ ಬರುತ್ತ ಇದ್ದನು; ಸಾಲನ ತರುವಾಯ ಜನಾಂಗಕ್ಕೆ ರಾಜನಾದನು; ಬಹು ಕಾಲ ರಾಜ್ಯವಾಳಿ ಜನರ ಮನಸ್ಸಿನಲ್ಲಿ ಸ್ಥಿರವಾದ ಒಂದು ಗೌರವ ಸ್ಥಾನವನ್ನು ಸಂಪಾದಿಸಿಕೊಂಡನು. ಈತನು ಆಡಳಿತದಲ್ಲಿ ಶಕ್ತನು, ಯುದ್ಧದಲ್ಲಿ ಧೀರನು, ಮತದಲ್ಲಿ ಶ್ರದ್ಧೆಯುಳ್ಳವನು, ಭಗವದ್ಭಕ್ತನು. ಸಂಸಾರದಲ್ಲಿ ಭೋಗಿಯಾಗಿದ್ದನು. ಪರಸ್ತ್ರೀವ್ಯಾಮೋಹಕ್ಕಾಗಿ ಒಂದುಸಲ ತಪ್ಪು ಕೂಡ ಮಾಡಿದನು. ಬಾತ್‌ಷೆಬ ಎಂಬ ಸುಂದರಿ ಇವನ ಆಶ್ರಿತರಲ್ಲಿ ಒಬ್ಬನ ಪತ್ನಿ. ಅವಳನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಇವನು ಅವಳ ಗಂಡನನ್ನು ಯುದ್ಧಕ್ಕೆ ಕಳುಹಿಸಿಬಿಟ್ಟು, ಅವಳನ್ನು ವಶಮಾಡಿಕೊಂಡು, ಅವನು ಅಲ್ಲಿ ತೀರಿಹೋಗಲು ಆ ವಿಧವೆಯನ್ನು ಮದುವೆಯಾದನು. ಅವಳಿಂದ ಹುಟ್ಟಿದ ಮಗು ಕಾಯಿಲೆಯಾದಾಗ ತನ್ನ ಪಾಪದಿಂದ ಇದು ಹೀಗಾಯಿತೆಂದು ಭಗವಂತನಲ್ಲಿ ಕ್ಷಮೆಯನ್ನು ಬೇಡಿ, ಈ ಮಗುವನ್ನು ಬದುಕಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡನು. ಮಗು ತೀರಿಹೋಗಲಾಗಿ ಇದು ಭಗವಂತನ ಇಚ್ಛೆ ಎಂದು ಆ ವಿಷಯವನ್ನು ಅಷ್ಟಕ್ಕೆ ಮರೆತು ಎಂದಿನಂತೆ ಧೈರ್ಯದಿಂದ ತನ್ನ ದಿನಚರ್ಯೆಯ ಕೆಲಸದಲ್ಲಿ ತೊಡಗಿದನು. ಹೀಗೆ ಕೆಸರಿನಲ್ಲಿ ನಡೆದ ಮತ್ತು ಕಾಲನ್ನು ತೊಳೆದ ಅನುಭವವನ್ನು ಪಡೆದು ಈ ರಾಜರ್ಷಿಯು ಜೀವನದಲ್ಲಿ ಸದಾ ಭಗವಂತನನ್ನು ನೆರವಾಗಿ ನಾಯಕನಾಗಿ ಗುರುವಾಗಿ ಎಣಿಸುತ್ತ ಲಾಭಾಲಾಭ ಜಯಾಪಜಯ ಸುಖದುಃಖಗಳನ್ನು ಅನುಭವಿಸುತ್ತ ಇದ್ದರೂ ಅವುಗಳಿಗೆ ಸೋಲದೆ ಧೀರವಾದ

ಬಾಳನ್ನು ಸಾಧಿಸಿದನು. ಸಾಮಾನ್ಯ ಜೀವನದಂತೆ ಆರಂಭವಾಗಿ ಕಷ್ಟ ಸುಖ ಗಳನ್ನು ನೋಡಿ ಅತ್ಯುತ್ತಮ ರಾಜಪದವಿಯನ್ನು ಏರಿ ಶರಣಭಾವದಲ್ಲಿ ಮುಗಿದ ತನ್ನ ಜೀವನದಲ್ಲಿ ಇವನು ಭಗವಂತನ ಕಾರುಣ್ಯವನ್ನು ಕಂಡದ್ದೇನೂ ಆಶ್ಚರ್ಯವಲ್ಲ. ಇವನ ಗೀತೆಗಳಲ್ಲಿ ಈ ಜೀವನದ ಹಲವು ಭಾವನೆಗಳು ಅಂದವಾದ ಆಕಾರವನ್ನು ತಾಳಿದುವು.

೨

ದೇವರ ಮಹಾಮಹಿಮೆಯನ್ನೂ ಮಾನವನ ವಿಷಯದಲ್ಲಿ ಅವನು ತೋರಿರುವ ಕೃಪೆಯನ್ನೂ ಈ ಗೀತದಲ್ಲಿ ಹೇಳಿದೆ.

"ಹೇ ದೇವ, ನನ್ನೊಡೆಯ, ನಿನ್ನ ಹೆಸರು ಲೋಕದಲ್ಲಿ ಎಷ್ಟು ಹಿರಿದಾಗಿದೆ. ನಿನ್ನ ಹಿರಿಮೆ ನಭೋಮಂಡಲವನ್ನು ಮೀರಿ ಬೆಳೆದಿದೆ.

"ಶತ್ರುಗಳನ್ನು ನಿಗ್ರಹಿಸುವುದಕ್ಕೆ, ಹಗೆಯನ್ನೂ ಹಟಮಾರಿಯನ್ನೂ ಅಡಗಿಸುವುದಕ್ಕೆ, ನೀನು ಮಕ್ಕಳು ಮರಿಗಳ ಬಾಯಿಂದ ಶಕ್ತಿಯನ್ನು ಏರ್ಪಡಿಸಿರುವೆ.

"ನಿನ್ನ ಕೈ ಮಾಡಿಟ್ಟ ಈ ನಭೋಮಂಡಲ, ನೀನು ಏರ್ಪಡಿಸಿರುವ ಚಂದ್ರ ತಾರೆಗಳು—ಇವನ್ನು ಕುರಿತು ಯೋಚಿಸುವೆನೆ, ಮನುಜನೆಷ್ಟರ ಲೆಕ್ಕ? ನೀನು ಅವನನ್ನು ನೋಡಬೇಕಾದದ್ದೇನು? ಅವನ ಸಂತತಿ ಎಷ್ಟರದು? ನೀನು ಅದನ್ನು ಹೊರೆಯಬೇಕಾದದ್ದೇನು?

"ಆದರೆ, ದೇವ, ನೀನು ಅವನಿಗೆ ದೇವತೆಗಳಿಗಿಂತ ಒಂದು ಮೆಟ್ಟಲು ಮಾತ್ರ ಕೀಳಾದ ಪದವಿಯನ್ನು ಕೊಟ್ಟಿದೀಯೆ. ಅವನ ತಲೆಯ ಮೇಲೆ ವೈಭವ ಗೌರವಗಳ ಮಕುಟವನ್ನು ಮುಂಡಿಸಿದೀಯೆ.

"ನಿನ್ನ ಎಲ್ಲ ಸೃಷ್ಟಿಯಮೇಲೆ ಅವನಿಗೆ ಪ್ರಭುತ್ವವನ್ನು ಕೊಟ್ಟಿದೀಯೆ. ಎಲ್ಲವನ್ನೂ ಅವನ ಕೈಕೆಳಗೆ ಇಟ್ಟಿದೀಯೆ.

"ಹೇ ದೇವ, ನನ್ನೊಡೆಯ ನಿನ್ನ ಕೀರ್ತಿ ಪ್ರಪಂಚದಲ್ಲಿ ಎಷ್ಟು ಹಿರಿದಾಗಿದೆ."

ಈ ಗೀತ ಕಳ್ಳಕಾಕರು ಹೆಚ್ಚಾಗಿ ಜನರಿಗೆ ತೊಂದರೆಕೊಡುತ್ತ ಇದ್ದ ಕಾಲದಲ್ಲಿ ಜನರ ಸ್ಥಿತಿಯನ್ನು ನೋಡಿ ಮರುಗಿ ಬರೆದದ್ದೆಂದು ಕಾಣುತ್ತದೆ.

"ಏಕೆ ದೂರ ಹೋದೆ ನನ್ನ ದೊರೆಯೆ? ಕಷ್ಟದ ವೇಳೆ ಏಕೆ ಮರೆಯಾಗಿ ನಿಂತೆ?

"ದುಷ್ಟರು ಕೊಬ್ಬಿ ದೀನರನ್ನು ತೊಳಲಿಸುತ್ತಿದಾರೆ.

"ಅವರು ಹೂಡಿದ ಮೋಸಗಳಲ್ಲಿ ಅವರೇ ಸಿಕ್ಕಿಕೊಳ್ಳುವಂತೆ ಮಾಡು ದೇವ. ಅವರು ಮನಸ್ಸಿನಲ್ಲಿ: ದೇವರು ನೋಡಿಕೊಳ್ಳುತ್ತಿಲ್ಲ, ಎತ್ತಲೋ ತಿರುಗಿದಾನೆ, ಇದು ಅವನಿಗೆ ಕಾಣುವುದಿಲ್ಲ, ಎಂದುಕೊಂಡಿದಾರೆ.

"ದೇವ! ಎಚ್ಚರಗೊಳ್ಳು, ದೀರ್ಘಬಾಹುವನ್ನೆತ್ತು. ದೀನರನ್ನು ಮರೆಯದಿರು.....

"ಅವರು ನಿನ್ನ ಮೇಲೆ ಭಾರ ಹಾಕಿರುವರು. ನೀನು ತಬ್ಬಲಿಗೆ ತಂದೆ."

ಇನ್ನೊಂದು ಕಡೆ "ಮೂರ್ಖನು ತನ್ನಲ್ಲಿ ತಾನು ದೇವರೇ ಇಲ್ಲವೆಂದುಕೊಂಡಿದಾನೆ" ಎಂದು ಹೇಳುತ್ತಾನೆ. ರಾಜ್ಯದ ಈ ಅವ್ಯವಸ್ಥೆಗಳನ್ನು ನೋಡಿಯೇ ಈತನು ಜನರಿಗೆ ಮುಂದಾಳಾಗಿ ಸಾಲ್ ರಾಜನಿಗೆ ಪ್ರತಿಯಾಗಿ ಬಂದು ರಾಜ್ಯವನ್ನು ಕಟ್ಟಿರಬಹುದು. ಮಾವನಾದ ಸಾಲ್ ದೊರೆಯು ಬಹು ವಿಧವಾಗಿ ತೊಂದರೆಕೊಟ್ಟಾಗ ಮುಂದಣ ಗೀತವನ್ನು ಬರೆದನು. ಇದರ ಮೊದಲಲ್ಲಿ "ದೇವರ ಸೇವಕ ಡೇವಿಡ್ಡನ ಒಂದು ಕೀರ್ತನೆ. ಅವನು ಈ ಕೀರ್ತನೆಯ ಮಾತುಗಳನ್ನು ದೇವರು ಅವನನ್ನು ಶತ್ರುಗಳ ಕೈಯಿಂದಲೂ ಸಾಲನ ಕೈಯಿಂದಲೂ ರಕ್ಷಿಸಿದಾಗ ಆಡಿದನು. ಅವನು ಹೇಳಿದ್ದೇನೆಂದರೆ" ಎಂದು ಪೀಠಿಕೆ ಇದೆ.

"ನಾನು ನಿನ್ನ ಮೇಲೆ ಭಾರ ಹಾಕುತ್ತೇನೆ, ನನ್ನ ಒಡೆಯ, ನನ್ನ ಬಲವೆ.

"ನೀನು ನನ್ನ ದುರ್ಗ, ನನ್ನ ಕೋಟೆ ಕೊತ್ತಲ, ನೀನು ನನ್ನ ಸಖನೂ.

"ನೀನೇ ನನ್ನ ಮೂಲಬಲ; ನನಗೆ ರಕ್ಷೆಯ ಗುರಾಣಿ. ನೀನೇ ನನ್ನ ವಿಜಯದ ಕಹಳೆ, ಗೆಲುವಿನ ಗೋಪುರ.

"ಹೊಗಳತರನಾದ ನಿನ್ನನ್ನು ಹೊಗಳಿ ನಾನು ಹಗೆಗಳಿಂದ ಸುರಕ್ಷಿತನಾಗಿರುತ್ತೇನೆ.

"ಮರಣ ಯಾತನೆಗಳು ನನ್ನನ್ನು ಮುಚ್ಚಿಕೊಂಡುವು. ದುಷ್ಟರ ಮೋಹರ ನನಗೆ ಭಯವನ್ನುಂಟುಮಾಡಿತು.

"ನರಕದ ನೋವುಗಳು ನನ್ನನ್ನು ಮುತ್ತಿದುವು. ಮೃತ್ಯುವಿನ ಪಾಶಗಳು ನನ್ನನ್ನು ಕಟ್ಟಿದುವು.

"ಇಂಥ ದುಃಖದಲ್ಲಿ ನಾನು ನಿನ್ನನ್ನು ಕರೆದೆ; ನಿನಗೆ ಮೊರೆಯಿಟ್ಟೆ. ಆಲಯದಲ್ಲಿದ್ದ ನಿನಗೆ ನನ್ನ ಮೊರೆ ಕೇಳಿಸಿತು. ನನ್ನ ಕೂಗು ನಿನ್ನ ಕಿವಿ ಮುಟ್ಟಿತು.

"ನೀನು ಕೋಪಗೊಂಡೆ. ಆಗ ಭೂಮಿ ನಡುಗಿತು, ಅದುರಿತು. ಬೆಟ್ಟಗಳು ಬೇರಲ್ಲಿ ಅಲುಗಿದುವು, ಆಡಿದುವು....

"ನೀನು ನಿನ್ನ ಬಾಣಗಳನ್ನು ಕಳುಹಿಸಿದೆ; ನನ್ನ ಹಗೆಗಳನ್ನು ಸದೆದೆ. ನಿನ್ನ ಮಿಂಚನ್ನು ಉಗಿದೆ, ಅವರ ಹಡಗೆಡಿಸಿದೆ.

"ನನಗಾಗದವರಿಂದ, ನನ್ನ ಹಗೆಗಳಿಂದ, ನೀನು ನನ್ನ ಸತ್ಯಕ್ಕೆ ಮೆಚ್ಚಿ ನನ್ನನ್ನು ರಕ್ಷಿಸಿದೆ. ನನ್ನ ನಡತೆ ಶುದ್ಧವಾದದ್ದರಿಂದ ನನ್ನನ್ನು ಕಾಪಾಡಿದೆ.

"ದಯೆಯುಳ್ಳವರಿಗೆ ನೀನು ದಯೆ ತೋರುವೆ. ಸತ್ಯವಂತರಿಗೆ ನೀನು ಸತ್ಯವನ್ನು ತೋರುವೆ. ಶುದ್ಧ ಹೃದಯರಿಗೆ ನೀನು ಪರಿಶುದ್ಧನು.

"ಶಠರಿಗೆ ನೀನು ಶಾಠ್ಯವನ್ನು ತೋರುವೆ. ದೀನರನ್ನು ನೀನು ರಕ್ಷಿಸುವೆ. ಕೊಬ್ಬಿ ನಡೆಯುವವರನ್ನು ಮುರಿಯುವೆ."

ತನ್ನ ಸೌಜನ್ಯವನ್ನು ನೋಡಿ ದೇವರು ತನ್ನನ್ನು ಕಾದನೆಂಬ ಇದರ ಭಾವ ಯೌವನದ ಭಾವ. ಈ ಗೀತಗಳೂ ಇದೇ ಸಂದರ್ಭದಲ್ಲಿ ಬರೆದ ವಾಗಿರಬಹುದು.

"ನೀನು ನನ್ನ ದೊರೆ.

"ನಿನ್ನ ಬಲದಿಂದ ನಾವು ನಮ್ಮ ಹಗೆಗಳನ್ನು ಗೆಲ್ಲುವೆವು; ನಿನ್ನ ಹೆಸರು ಹೇಳಿ ನಮ್ಮ ವಿರೋಧಿಗಳನ್ನು ತುಳಿಯುವೆವು. ನಾನು ನನ್ನ ಬಿಲ್ಲಿನಲ್ಲಿ ನಂಬಿಕೆಯಿಡುವುದಿಲ್ಲ. ನನ್ನ ಕತ್ತಿ ನನ್ನನ್ನು ಕಾಯಲಾರದು.

"ನಮ್ಮ ವೈರಿಗಳಿಂದ ನಮ್ಮನ್ನು ನೀನು ರಕ್ಷಿಸಿದೆ. ನಮ್ಮ ಹಗೆಗಳನ್ನು ನೀನು ನಾಚಿಸಿದೆ."

ನೆನವಿಗೆ ತರುವುದಕ್ಕೆ ರಚಿಸಿದ್ದು ಎಂದು ಪೀಠಿಕೆ ಬರೆದು, ಈ ಗೀತೆಯಲ್ಲಿ ಇದೇ ಭಾವನೆಯನ್ನು ವ್ಯಕ್ತಪಡಿಸಿದೆ.

"ನನ್ನನ್ನು ರಕ್ಷಿಸಲು ಬೇಗ ಬಾ, ದೇವ. ಬೇಗ ಬಂದು ನನಗೆ ನೆರವಾಗು ಪ್ರಭುವೆ. ನನ್ನ ಜೀವನವನ್ನು ಕೆಡಿಸಬೇಕೆನ್ನುವರು ಸೋತು ಹೋಗಲಿ; ಅವಮಾನಪಡಲಿ. ನನಗೆ ಕೇಡನ್ನು ಬಯಸುವವರು ಹಿಮ್ಮೆಟ್ಟಿಹೋಗಲಿ, ದಿಕ್ಕುಗೆಡಲಿ. ಅಹ ಅಹ ಎಂದು ಗಹಗಹಿಸುತ್ತಿರುವವರು ಬಂದ ದಾರಿಯಲ್ಲಿ ಹಿಂದಿರುಗಲಿ; ಅವರ ಮೂಳತನಕ್ಕೆ ಇದು ಮರ್ಯಾದೆ ಆಗಲಿ.

"ನಿನ್ನನ್ನು ಆಶ್ರಯಿಸಿದವರು ಆನಂದ ಹೊಂದಲಿ; ನಿನ್ನ ಹೆಸರು ಹೇಳಿ ಸಂತೋಷಪಡಲಿ. ನಿನ್ನ ಕೃಪೆಯನ್ನಪೇಕ್ಷಿಸುವವರು ಸದಾ ಕಾಲದಲ್ಲಿ ದೇವರು ಹಿರಿಯನು ಎಂದು ಹೊಗಳುವಂತಿರಲಿ.

"ನಾನು ದೀನನಾಗಿದೇನೆ; ದಿಕ್ಕಿಲ್ಲದಿದೇನೆ. ನನ್ನ ಬಳಿಗೆ ಬೇಗ ಬಾ, ದೇವ. ನನಗೆ ನೀನೇ ನೆರವು, ಉದ್ಧಾರಕರ್ತ; ತಳುವದಿರು ಪ್ರಭುವೆ."

ಇದು ಫಿಲಿಸ್ಟೈನ್ ಜನರು ಅವನನ್ನು ಹಿಡಿದಾಗ ಬರೆದದ್ದು.

"ನನಗೆ ಭಯವಾದಾಗ ನಾನು ನಿನ್ನನ್ನು ನಂಬುತ್ತೇನೆ. ನಾನು ನಿನ್ನನ್ನು ಹೊಗಳುತ್ತೇನೆ, ನಿನ್ನಮೇಲೆ ಭಾರ ಹಾಕುತ್ತೇನೆ. ಜನರು ಏನು ಮಾಡುವರೋ ಎಂದು ಭಯಪಡುವುದಿಲ್ಲ....

"ನಾನು ಅಲೆಯುವುದನ್ನು ನೀನು ನೋಡುತ್ತಿದೀಯೆ. ನನ್ನ ಕಣ್ಣೀರನ್ನು ನಿನ್ನ ಪಾತ್ರೆಯಲ್ಲಿ ಕೂಡಿಡು. ನನ್ನ ಕತೆ ನಿನ್ನ ಪುಸ್ತಕದಲ್ಲಿಲ್ಲವೆ?....

"ನಾನು ದೇವರಮೇಲೆ ಭಾರಹಾಕಿದೇನೆ. ನನಗೆ ಮಾನವರು ಏನು ಮಾಡುವರೋ ಎಂದು ನಾನು ಅಂಜುವುದಿಲ್ಲ.

"ಸಾಯದಂತೆ ಈ ಜೀವವನ್ನು ಉಳಿಸಿದವನು ನೀನು. ಇಲ್ಲಿ ಬೀಳದಂತೆ ನೀನು ನೋಡಿಕೊಳ್ಳದೆ ಬಿಡುವೆಯಾ? ಜೀವನದ ಬೆಳಕಿನಲ್ಲಿ ನಿನ್ನೆದುರಿಗೆ ನಡೆಯುವಂತೆ ಮಾಡದಿರುವೆಯಾ?"

ಈ ಗೀತೆಗಳಲ್ಲಿ ಬಹು ತೀವ್ರವಾದ ಯಾತನೆಯೂ, ಅದರಿಂದ ಬಂದ ಶರಣಭಾವವೂ ಕಾಣುತ್ತದೆ.

"ದೇವ, ಕೋಪಗೊಂಡು ನನ್ನನ್ನು ಗದರಬೇಡ. ತೀವ್ರ ಆಗ್ರಹದಲ್ಲಿ ದಂಡನೆಮಾಡಬೇಡ.

"ಪ್ರಭು, ನಾನು ದುರ್ಬಲನು. ನನ್ನಲ್ಲಿ ಕೃಪೆ ತೋರು. ನನ್ನ ದೇಹ ನೋತಿದೆ, ಅದನ್ನು ಗುಣಪಡಿಸು. ನನ್ನ ಆತ್ಮ ನೋತಿದೆ. ಇನ್ನೆಷ್ಟುಕಾಲ ಹೀಗೆ ದೊರೆಯೆ?

"ಭಗವಂತ ಬೇಗ ಬಾ, ಭವಬಂಧವನ್ನು ಬಿಡಿಸು. ನಿನ್ನ ದಯೆಯು ಗುರುತಾಗಿ ನನ್ನನ್ನು ರಕ್ಷಿಸು.

"ಸಾವಿನಲ್ಲಿ ನಿನ್ನ ನೆನವೆಲ್ಲಿ; ಗೋರಿಯಿಂದ ನಿನ್ನನ್ನು ವಂದಿಸುವ ರಾರು?

"ನರಳಿ ನರಳಿ ನನಗೆ ಸಾಕಾಯಿತು. ಇರುಳೆಲ್ಲ ಅಳುತ್ತಾ ನನ್ನ ಹಾಸಿಗೆಯನ್ನು ನೆನೆಯಿಸುತ್ತಿದೇನೆ; ನನ್ನ ಕಣ್ಣೀರಲ್ಲಿ ಅದು ತೇಲುತ್ತಿದೆ.

"ದೇವ, ಹೇ ದೇವ, ನನ್ನ ಕೈಬಿಟ್ಟೆಯೇಕೆ? ನಾನು ಮೊರೆಯಿಡು ತ್ತಿರಲಾಗಿ ರಕ್ಷಿಸಲು ಬಾರದೆ ದೂರ ಇಹೆ ಏಕೆ?

"ನನ್ನ ದೈವವೇ, ನಾನು ಹಗಲು ಅಳುತ್ತಿದೇನೆ. ನೀನು ಕೇಳುತ್ತಿಲ್ಲ ರಾತ್ರಿ ಕೂಡ ನಾನು ಅಳುವನ್ನು ನಿಲ್ಲಿಸುವುದಿಲ್ಲ.

"ಇಸ್ರೇಲ್ ಜನದ ಸ್ತೋತ್ರವನ್ನು ಪಡೆದ ಓ ಪರಿಶುದ್ಧ ಮೂರ್ತಿ, ನಮ್ಮ ಹಿರಿಯರು ನಿನ್ನನ್ನು ನಂಬಿದರು. ಅವರು ನಂಬಿದಂತೆ ನೀನು ಅವರನ್ನು ಹೊರೆದೆ.

"ಅವರು ಮೊರೆಯಿಟ್ಟರು, ಬಿಡುಗಡೆ ಹೊಂದಿದರು. ನಿನ್ನನ್ನು ನಂಬಿ ಅವರು ಕೆಡಲಿಲ್ಲ.

"ಆದರೆ ನಾನು ಹುಳುವಾದೆ ಮನುಷ್ಯನಾಗಲಿಲ್ಲ; ಜನರ ನಗೆಗೆ ಗುರಿಯಾದೆ, ಅವಮಾನಪಟ್ಟೆ. ನನ್ನನ್ನು ಕಂಡವರು ನನ್ನನ್ನು ಅಪಹಾಸ್ಯ ಮಾಡುತ್ತಾರೆ. ತುಟಿ ಚಾಚಿ ನಾಲಗೆ ನೀಡಿ ತಲೆಯಾಡಿಸುತ್ತಾರೆ.

"'ದೇವರು ದೇವರು ಎಂದು ಇವನು ಕೊಂಡಾಡಿ ನಂಬಿದನು. ದೇವರು ಬಿಡಿಸಲಿ ಇವನನ್ನ ನೋಡೋಣ' ಎಂದು ಹೀಯಾಳಿಸುತ್ತಿದಾರೆ.

"ತಾಯ ಗರ್ಭದಿಂದ ನನ್ನನ್ನು ತಂದವನು ನೀನು. ನಾನು ಹಾಲು ಕುಡಿವಂದು ನನಗೆ ಭರವಸೆಯನ್ನುಂಟುಮಾಡಿದೆ.

"ಗರ್ಭದಲ್ಲಿರುವಾಗಲೇ ನಾನು ನಿನ್ನವನಾದೆ. ಅಂದಿನಿಂದ ನೀನು ನನ್ನ ದೇವರು.

"ಈಗ ನೀನು ದೂರನಾಗದಿರು. ದುಃಖ ಹತ್ತಿರವಾಗಿದೆ, ಬೇರೆ ನೆರವಿಲ್ಲ.... ದೂರ ಹೋಗದಿರು ದೊರೆಯೇ. ನನ್ನ ಬಲವೇ ನನಗೆ ನೆರವಾಗಿ ಬಳಿಯಲ್ಲೇ ನಿಲ್ಲು."

"ಸಾರಂಗವು ಹರಿಯುವ ನೀರಿಗೆ ಹಂಬಲಿಸುವಂತೆ, ಹೇ ದೇವ, ನನ್ನ ಮನಸ್ಸು ನಿನ್ನನ್ನು ಬಯಸಿ ಹಂಬಲಿಸುತ್ತಿದೆ.

"ನನ್ನ ಆತ್ಮ ದೇವರಿಗಾಗಿ, ಜೀವ ದೈವಕ್ಕಾಗಿ ತೃಷೆಗೊಂಡಿದೆ. ನಾನು ಎಂದು ದೇವರ ಮುಂದೆ ಬಂದು ನಿಲ್ಲುವೆನು?

"ಹಗಲೂ ರಾತ್ರಿಯೂ ನನ್ನ ಕಣ್ಣೀರು ನನ್ನ ಊಟವಾಗಿದೆ. ಇವರೋ ಮರಳಿ ಮರಳಿ ನನಗೆ 'ಎಲ್ಲಿ ನಿನ್ನ ದೇವರು' ಎನ್ನುತ್ತಿದಾರೆ..

"ಆತ್ಮವೇ ಏಕೆ ಕುಗ್ಗಿರುವೆ? ನನ್ನ ಅಂತರ್ಯವೇ ಏಕೆ ಕಾತರಿಸುವೆ? ದೇವರಲ್ಲಿ ನಂಬಿಕೆಯಿಡು. ಅವನ ದೃಷ್ಟಿ ಸಲಹಿತೆಂದು ಅವನನ್ನು ಹೊಗಳುವ ದಿನ ಬರುವುದು.

"ದೇವ, ನನ್ನ ಜೀವ ಅಂತರ್ಯದಲ್ಲಿ ಕುಗ್ಗಿದೆ. ಆದ್ದರಿಂದ ನಾನು ನಿನ್ನನ್ನು ಬೇಡುತ್ತೇನೆ. ನಿನ್ನ ಅಪ್ಪಣೆಯಾಗಲು ಸಮುದ್ರ ಸಮುದ್ರವನ್ನು ಕರೆದು ಮೇಲ್ಬರಿದಂತೆ ಆಯಿತು. ಕಷ್ಟದ ಪರಂಪರೆ ತರಂಗ ತರಂಗವಾಗಿ ನನ್ನಮೇಲೆ ಹರಿಯಿತು.

"ಆದರೂ ದೇವರು ಹಗಲಲ್ಲಿ ನನ್ನನ್ನು ಕರುಣಿಸಿ ಕಾಯುವನು. ಇರುಳಲ್ಲಿ ನನಗೆ ಅವನ ಕೀರ್ತನೆ ಇರುವುದು; ನನ್ನ ಜೀವನದ ದೈವವನ್ನು ಕುರಿತ ಪ್ರಾರ್ಥನೆ ಇರುವುದು."

ಈ ಗೀತ ದೇವರು ಕಾಪಾಡಿದನೆಂದು ಭಾವ ಬಂದಾಗ ಬರೆದದ್ದು. ಮೂಲದಲ್ಲಿ ಕುರಿ ಮತ್ತು ಅದರ ಕಾವ ಎಂದಿರುವ ಕಡೆ ಇಲ್ಲಿ ನಮ್ಮ ಪದ್ಧತಿಯನ್ನು ಅನುಸರಿಸಿ ಗೋವು ಗೋಪಾಲ ಎಂದು ಹೇಳಿದೆ. ಎರಡರ ಅಭಿಪ್ರಾಯವೂ ಒಂದೆ. ಕುರಿಯಾಗಲಿ ಕರುವಾಗಲಿ ಏನನ್ನೂ ಕಾಣದ ಪ್ರಾಣಿ. ಅದರ ರಕ್ಷಕನು ಅದನ್ನು ನೋಡಿಕೊಳ್ಳಬೇಕು. ಹುಲಿಗೆ

ತೋಳಕ್ಕೆ ಸಿಕ್ಕಿದರೆ ಅದು ಹೊಡೆದಾಡಲಾರದು. ಅವನು ಅದನ್ನು ಉಳಿಸಿ ಕೊಳ್ಳಬೇಕು. ಅದು ಅವನನ್ನೇ ನಂಬಿರುತ್ತದೆ; ಅವನು ನಡೆಸಿದಂತೆ ನಡೆಯುತ್ತದೆ.

"ನಾನು ಗೋವು. ನನ್ನ ದೈವ ಗೋಪಾಲ. ನಾ ಬಡವನಲ್ಲ. ಅವನು ನನ್ನನ್ನು ಹಸುರ ಕಾವಲಿನಲ್ಲಿ ಮಲಗಿಸುತ್ತಾನೆ; ತಿಳಿನೀರ ತಾಣ ಗಳಿಗೆ ಕರೆದೊಯ್ಯುತ್ತಾನೆ.

"ಅವನು ನನ್ನ ಆತ್ಮವನ್ನು ಉಜ್ಜೀವಿಸುತ್ತಾನೆ; ಅವನ ಕೀರ್ತಿ ಬೆಳೆಯುವಂತೆ ನನ್ನನ್ನು ಧರ್ಮದ ದಾರಿಯಲ್ಲಿ ನಡೆಯಿಸುತ್ತಾನೆ.

"ಇದು ಸತ್ಯ. ಸಾವಿನ ನೆರಳು ಕವಿದ ಕಣಿವೆಯಲ್ಲಿ ನಡೆಯುತ್ತಿರುವೆ ನಾದರೂ ಕೇಡಾದೀತೆಂದು ನಾನು ಅಂಜುವುದಿಲ್ಲ.

"ಏಕೆಂದರೆ, ನೀನು ನನ್ನ ಜೊತೆಯಲ್ಲಿದೀಯೆ. ನಿನ್ನ ಗದೆ ನನ್ನನ್ನು ಸಲಹುತ್ತಿದೆ. ನೀನು ಕೊಟ್ಟ ಊರುಗೋಲು ನನ್ನ ಕೈಯಲ್ಲಿದೆ.

"ನನ್ನ ಹಗೆಗಳು ನೋಡುತ್ತಿರುವಂತೆಯೇ ನೀನು ನನಗೆ ಒಂದು ಗಾದಿಯನ್ನು ಮಾಡುತ್ತೀಯೆ; ನನಗೆ ಅಭಿಷೇಕಮಾಡುತ್ತೀಯೆ.

"ನಿನ್ನ ಕೃಪಾರಸದಿಂದ ನನ್ನ ಪಾತ್ರೆ ತುಂಬಿ ಹರಿಯುತ್ತದೆ.

"ಇದಕ್ಕೇನು ಸಂದೇಹ? ನಿನ್ನ ಕರುಣೆ ನಿನ್ನ ದಯೆ ನನ್ನ ಬಾಳ ದಿನವೆಲ್ಲ ನನ್ನ ಜೊತೆಯಲ್ಲಿರುವುವು. ನಾನು ನಿನ್ನ ಹೃದಯದಲ್ಲಿ ನಿಲ್ಲುವೆನು."

ದೊರೆಯು ಬಾತ್‌ಷೆಬಳ ಸಹವಾಸ ಮಾಡಿದಮೇಲೆ ಗುರುವಾದ ನಾಥನ್ ಬಂದು ನೀನು ಮಾಡಿದ್ದು ತಪ್ಪೆಂದು ಹೇಳಿದಾಗ ಡೇವಿಡ್ ಈ ಗೀತವನ್ನು ರಚಿಸಿದನು.

"ದೇವ ನನಗೆ ಕೃಪೆ ತೋರು. ನೀನು ಕರುಣಾಳು. ನೀನು ದಯಾ ಸಾಗರನಾದ್ದರಿಂದ ನನ್ನ ತಪ್ಪುಗಳನ್ನು ಅಳಿಸು.

"ನನ್ನ ತಪ್ಪನ್ನು ತೊಳೆದುಬಿಡು. ನನ್ನ ಪಾಪವನ್ನು ನೀಗು.

"ನನ್ನ ತಪ್ಪನ್ನು ನಾನು ಒಪ್ಪಿಕೊಳ್ಳುತ್ತೇನೆ. ನನ್ನ ಪಾಪ ನನ್ನ ಎದುರಿಗೇ ಇದೆ.

"ಈ ಅತ್ಯಾಚಾರವನ್ನು ನಿನ್ನಲ್ಲಿ ಮಾಡಿದೆನು. ಇದು ನಿನ್ನ ವಿಷಯದಲ್ಲಿ ತಪ್ಪು ಅಲ್ಲದೆ ಬೇರೆಯಿಲ್ಲ. ನೀನು ಶಿಕ್ಷಿಸುವುದು ನ್ಯಾಯ, ದಂಡಿಸುವುದು ನ್ಯಾಯ.

"ನೋಡು, ನಾನು ಹುಟ್ಟಿದ್ದು ತಪ್ಪಿನಿಂದ. ನಮ್ಮ ತಾಯಿ ನನ್ನನ್ನು ಧರಿಸಿದ್ದು ಪಾಪದಿಂದ.

"ನೀನು ಅಂತಃಶುದ್ಧಿಯನ್ನು ನಿರೀಕ್ಷಿಸುತ್ತೀಯೆ; ನನ್ನ ಅಂತರ್ಯದಲ್ಲಿ ಒಳ್ಳೆಯದನ್ನು ತಿಳಿಸುತ್ತೀಯೆ.

"ನನ್ನನ್ನು ಶುದ್ಧನನ್ನಾಗಿ ಮಾಡು, ನಾನು ಶುದ್ಧನಾಗುವೆನು. ನನ್ನನ್ನು ತೊಳೆ, ನಾನು ತುಷಾರದಂತೆ ಶುಭ್ರನಾಗುವೆನು......

"ನನ್ನ ತಪ್ಪಿನಿಂದ ನಿನ್ನ ಮುಖವನ್ನು ತಿರುಗಿಸಿಕೋ. ನನ್ನ ತಪ್ಪುಗಳನ್ನು ಒರೆಸು......

"ನನ್ನನ್ನು ದೂರ ತಳ್ಳಬೇಡ. ನಿನ್ನ ಸತ್ವವನ್ನು ನನ್ನಿಂದ ಹಿಂದಕ್ಕೆ ತೆಗೆದುಕೊಳ್ಳಬೇಡ.....

"ಕೊಲೆಯ ಪಾತಕದಿಂದ ನನ್ನನ್ನು ಬಿಡಿಸು. ನನ್ನ ದೇವರೇ, ನನ್ನ ಉದ್ಧಾರಕರ್ತನೇ.

"ನಿನಗೆ ಯಜ್ಞ ಬೇಡ. ಬೇಕಾಗಿದ್ದರೆ ನಾನು ಮಾಡುತ್ತಿದ್ದೆ. ಹವಿಸ್ಸನ್ನು ಸುಟ್ಟರೆ ನೀನು ಸಂತೋಷಪಡುವುದಿಲ್ಲ.

"ನಿನಗೆ ಇಷ್ಟವಾದ ಯಜ್ಞ ದೀನವಾದ ಮನಸ್ಸು.

"ತಪ್ಪನ್ನೊಪ್ಪಿಕೊಂಡು ದೀನವಾದ ಮನಸ್ಸನ್ನು ನೀನು ನಿರಾಕರಿಸುವುದಿಲ್ಲ."

ಈ ಗೀತಗಳ ಭಾವವು ಅನೇಕ ಭಕ್ತಿಗೀತಗಳಲ್ಲಿ ಕಾಣತಕ್ಕದ್ದು.

"ದೇವ, ನನ್ನ ಮನಸ್ಸನ್ನು ನಿನ್ನಲ್ಲಿ ಇಟ್ಟೆನು.

"ನನ್ನೊಡೆಯ, ನಾನು ನಿನ್ನನ್ನು ನಂಬಿದೇನೆ. ನಾನು ನಾಚುವಂತೆ ಮಾಡಬೇಡ. ನನ್ನ ಹಗೆಗಳು ನನ್ನನ್ನು ಹಂಗಿಸದಂತೆ ನೋಡಿಕೊ.

"ನಿಜವಾಗಿ ಬೇಡುತ್ತೇನೆ: ನಿನ್ನನ್ನು ನಂಬಿದ ಯಾರಿಗೂ ನಾಚುವ ಗತಿ ಬೇಡ; ನಿಷ್ಕಾರಣವಾಗಿ ಹಿಂಸಿಸುವವರಿಗೆ ನಾಚಿಕೆ ಬರಲಿ.

"ನನಗೆ ನಿನ್ನ ದಾರಿಯನ್ನು ತೋರಿಸು, ದೇವ; ಅದರಲ್ಲಿ ನಡೆಯುವು ದನ್ನು ನನಗೆ ಕಲಿಸು.

"ನನ್ನನ್ನು ನಿನ್ನ ಸತ್ಯದಲ್ಲಿ ನಡೆಸು. ನನ್ನನ್ನು ತಿದ್ದು.

"ನೀನೇ ನನ್ನ ಉದ್ಧಾರಕರ್ತ ಸ್ವಾಮಿ. ನಾನು ಸದಾ ನಿನ್ನ ಆಜ್ಞಾಧಾರಕನು.

"ಪ್ರಭುವೆ, ನಿನ್ನ ಕೃಪೆಯೂ, ನಿನ್ನ ದಯೆಯೂ ಪುರಾತನವಾದವು ಎನ್ನುವುದನ್ನು ನೆನೆ.

"ನನ್ನ ತಾರುಣ್ಯದ ತಪ್ಪುಗಳನ್ನೂ ಹಿಂದಣ ಪಾಪಗಳನ್ನೂ ನೆನೆಯ ದಿರು, ನಿನ್ನ ಧರ್ಮ. ನೀನು ಕರುಣಾಳುವೆನ್ನುವುದಕ್ಕೆ ಅನುಸಾರವಾಗಿ ನನ್ನನ್ನು ನೋಡು."

"ದೇವರು ನನಗೆ ದೀಪ, ನನ್ನ ಉದ್ಧಾರಕರ್ತ. ನಾನು ಯಾರಿಗೇಕೆ ಹೆದರಲಿ? ಅವನು ನನ್ನ ಬಾಳ ಬಲ. ನಾನು ಯಾರಿಗೆ ಅಂಜಲಿ?....

"ನನ್ನ ಎದುರಲ್ಲಿ ಸೇನೆ ಲಕ್ಷ್ಯವಾಗಿ ನಿಲ್ಲಲಿ. ನನ್ನ ಎದೆ ನಡುಗದು. ನನ್ನ ಮೇಲೆ ದಂಡು ಬರಲಿ. ನಾನು ಧೈರ್ಯವಾಗಿರುತ್ತೇನೆ.

"ನೀನು ನಿನ್ನ ಮುಖವನ್ನು ಮರೆಯಿಸದಿರು, ದೇವ; ಕೋಪದಿಂದ ನನ್ನನ್ನು ದೂರ ತಳ್ಳದಿರು. ನೀನು ಹಿಂದೆ ನನ್ನ ನೆರವಾಗಿದ್ದೆ. ಈಗ ನನ್ನನ್ನು ತೊರೆಯದಿರು, ನನ್ನ ಕೈಬಿಡದಿರು, ನನ್ನನ್ನುದ್ಧರಿಸುವ ದೊರೆಯೆ.

"ನನ್ನ ತಾಯಿ ನನ್ನ ತಂದೆ ನನ್ನ ಕೈಬಿಟ್ಟಾಗಲೂ ನನ್ನ ದೇವರು ನನ್ನ ಕೈಹಿಡಿದಿರುವನು......"

ಈ ಗೀತೆಯ ಪ್ರಾರ್ಥನೆಯೂ ಅಂಥದೇ.

"ನನ್ನ ಪ್ರಾರ್ಥನೆಯನ್ನು ಕೇಳು; ದೇವ, ನನ್ನ ಮೊರೆಗೆ ಕಿವಿಗೊಡು. ನೀನು ಭಕ್ತವತ್ಸಲನೂ ಧರ್ಮರಕ್ಷಕನೂ ಆದಕಾರಣ ನನ್ನಲ್ಲಿ ಅನುಗ್ರಹಿಸು.

"ನಿನ್ನ ಸೇವಕನ ಜೊತೆಗೆ ಲೆಕ್ಕಾಚಾರಕ್ಕೆ ನಿಲ್ಲಬೇಡ. ನೀನು ನೋಡುವುದಾದರೆ ನಿರ್ದೋಷಿಯಾದ ಚೇತನವಿಲ್ಲ......

"ನಾನು ಪುರಾತನ ಕಾಲವನ್ನು ನೆನೆಯುತ್ತೇನೆ; ನಿನ್ನ ಕತೆಗಳನ್ನು ಸ್ಮರಿಸುತ್ತೇನೆ; ನಿನ್ನ ಚರಿತಗಳನ್ನು ಧ್ಯಾನಮಾಡುತ್ತೇನೆ.

"ಬೆಳಗಾಗ ನಿನ್ನ ಕೃಪೆಯನ್ನು ಕೇಳುವಂತೆ ನನಗೆ ಅನುಗ್ರಹಿಸು; ನಾನು ನಿನ್ನನ್ನು ನಂಬಿದೇನೆ. ನಾನು ನಡೆಯಬೇಕಾದ ದಾರಿಯನ್ನು ನನಗೆ ತೋರಿಸಿಕೊಡು; ನನ್ನ ಆತ್ಮವನ್ನು ನಿನ್ನಲ್ಲಿ ಎತ್ತಿಟ್ಟಿದ್ದೇನೆ.

"ನಿನ್ನ ಇಷ್ಟವನ್ನು ನಡೆಯಿಸುವುದನ್ನು ಹೇಳಿಕೊಡು; ನೀನು ನನ್ನ ಪ್ರಭು. ನೀನು ಧರ್ಮಮೂರ್ತಿ, ಧರ್ಮದ ನೆಲೆಗೆ ನನ್ನನ್ನು ನಡೆಸು."

ದೇವರು ಸರ್ವಜ್ಞನು. ನಮ್ಮಲ್ಲಿ ಅವನ ಕಣ್ಣಿಗೆ ಕಾಣದ ಲವಲೇಶ ವಿಲ್ಲ ಎಂಬ ಭಾವ ಈ ಗೀತಗಳಲ್ಲಿ ಉಕ್ತವಾಗಿದೆ.

"ದೇವ, ನೀನು ನನ್ನ ಅಂತರ್ಯವನ್ನು ಪರೀಕ್ಷಿಸಿ ತಿಳಿದುಕೊಂಡಿದೀಯೆ.

"ನಾನು ನಿಲ್ಲುವುದನ್ನು ನೀನು ಬಲ್ಲೆ. ನಾನು ಕೂಡುವುದನ್ನು ನೀನು ಬಲ್ಲೆ. ನಾನು ಮಾಡುವ ಯೋಚನೆಯನ್ನು ನನಗೆ ಮೊದಲೇ ಬಲ್ಲೆ.

"ಬಾಳ ದಾರಿಯನ್ನು ನೀನು ಆವರಿಸಿದೀಯೆ. ನಾನು ನಿಂತಲ್ಲಿ ನೀನಿರುವೆ. ನನ್ನ ನಡತೆಯನ್ನೆಲ್ಲ ನೀನು ಕಂಡಿದೀಯೆ.

"ನನ್ನ ನಾಲಗೆಯಲ್ಲಿ ಒಂದು ಮಾತು ಬಂತೋ ಇಲ್ಲವೋ, ಆಗಲೇ ನೀನು ಅದನ್ನು ಪೂರ್ಣವಾಗಿ ಬಲ್ಲೆ.

"ನೀನು ನನ್ನನ್ನು ಹಿಂದೆ ಮುಂದೆ ಆವರಿಸಿ ನನ್ನನ್ನು ತೀರ ಆಕ್ರಮಿಸಿ ದೀಯೆ.

"ಇದನ್ನು ತಿಳಿದು ನಾನು ಅಚ್ಚರಿಗೊಂಡಿದೇನೆ. ಈ ಅದ್ಭುತವನ್ನು ನಾನು ಗ್ರಹಿಸಲಾರೆನು.

"ನಿನ್ನಿಂದ ತಪ್ಪಿಸಿಕೊಂಡು ನಾನು ಎಲ್ಲಿಗೆ ಓಡಬಲ್ಲೆನು? ನಿನ್ನ ಸಾನ್ನಿಧ್ಯವನ್ನುಳಿದು ನಾನು ಹೋಗುವುದು ಎಲ್ಲಿ?

"ಸ್ವರ್ಗಕ್ಕೆ ಹೋದೆನೆನ್ನು, ನೀನು ಅಲ್ಲಿರುವೆ. ನರಕದಲ್ಲಿ ಮಲಗು ವೆನೆ, ಅಕೋ ಅಲ್ಲಿಯೂ ನೀನಿರುವೆ.

"ಉದಯದ ರೆಕ್ಕೆಗಳನ್ನು ಪಡೆದು ನಾನು ಸಾಗರದ ಮೇರೆಯನ್ನು ಸಾರಬಹುದು.

"ಅಲ್ಲಿ ಕೂಡ ನಿನ್ನ ಕೈ ನನ್ನನ್ನು ನಡೆಸುತ್ತದೆ. ನಿನ್ನ ಬಲಗೈ ನನ್ನನ್ನು ಎತ್ತಿ ಹಿಡಿಯುತ್ತದೆ.

"ಕತ್ತಲಲ್ಲಿ ನನ್ನನ್ನು ಮರೆಸಿಕೊಳ್ಳಬಹುದು ಎನ್ನುವೆನೆ, ನನ್ನನ್ನು ಸುತ್ತಿದ ಇರುಳು ಬೆಳಕಾಗುತ್ತದೆ.

"ಇದು ಸತ್ಯ. ಕತ್ತಲು ನಿನ್ನಿಂದ ಮರೆಮಾಡಲಾರದು.

"ಇರುಳು ಹಗಲಿನ ರೀತಿ ಬೆಳಗುವುದು ನಿನಗೆ. ಕತ್ತಲೂ ಬೆಳಕೂ ನಿನಗೆ ಒಂದೇ....

"ಹೇ ದೇವ, ನನ್ನನ್ನು ಶೋಧಿಸು. ನನ್ನ ಮನಸ್ಸನ್ನು ತಿಳಿದುಕೊ. ನನ್ನನ್ನು ಪರೀಕ್ಷಿಸು. ನನ್ನ ಭಾವವನ್ನರಿ.

"ನನ್ನಲ್ಲಿ ದುರ್ಬುದ್ಧಿ ಇದೆಯೇ ನೋಡಿ ಮುಕ್ತಿಯ ಮಾರ್ಗಕ್ಕೆ ನನ್ನನ್ನು ಕರೆದುಕೋ."

ತನಗೆ ತಿಳಿವಿನ ಹೆಮ್ಮೆಯಿಲ್ಲವೆಂದು ಈ ಗೀತದಲ್ಲಿ ಹೇಳಿದಾನೆ.

"ದೇವ, ನನ್ನ ಹೃದಯ ಬೀಗಿಲ್ಲ, ನನ್ನ ನೋಟದಲ್ಲಿ ಗರ್ವವಿಲ್ಲ.

"ತತ್ತ್ವವೆಂದು, ಶಾಸ್ತ್ರವೆಂದು, ನನಗೆ ನಿಲುಕದ ವಿಷಯಗಳಲ್ಲಿ ನಾನು ಅಧಿಕ ಪ್ರಸಂಗಕ್ಕೆ ಹೋಗಿಲ್ಲ.

"ನಾನು ದೀನನಾಗಿದೇನೆ, ಶಾಂತನಾಗಿದೇನೆ; ತಾಯ ಮೊಲೆಯನ್ನು ಬಿಟ್ಟ ಮಗುವಿನಂತೆ ಇದ್ದೇನೆ. ನನ್ನ ಆತ್ಮ ಇಂಥ ಮಗುವಿನಂತೆ ಏನೂ ಅರಿಯದೆ ಇದೆ.

"ಇನ್ನು ಮೇಲೆ ಎಂದೆಂದಿಗೂ ನನ್ನ ಭರವಸೆಯೆಲ್ಲ ನಿನ್ನಲ್ಲಿರಲಿ."

ಭಗವಂತನ ವೈಭವವನ್ನು ಈ ಗೀತದಲ್ಲಿ ವಿಭಾವಿಸಿದೆ.

"ಆಕಾಶವು ದೇವರ ವೈಭವವನ್ನು ಮೊಳಗುತ್ತದೆ. ಅದರ ಐಶ್ವರ್ಯದಲ್ಲಿ ಅವನ ಕೈಯ ಕೆಲಸ ಕಾಣುತ್ತದೆ.

"ಹಗಲು ಹಗಲಿಗೆ ಈ ವಿಷಯವನ್ನು ಉಸುರುತ್ತದೆ. ಇರುಳು ಇರುಳಿಗೆ ಈ ತಿಳಿವನ್ನು ಕೊಡುತ್ತಿದೆ.

"ಅವು ಮಾತನಾಡುವುದಿಲ್ಲ. ಅವುಗಳ ಧ್ವನಿ ಕೇಳಿಸುವುದಲ್ಲ. ಆದರೆ ಅವುಗಳ ಅರ್ಥ ಪ್ರಪಂಚವೆಲ್ಲ ಹರಡಿದೆ. ಅವುಗಳ ಭಾವ ಲೋಕದ ಕೊನೆಯನ್ನು ಮುಟ್ಟಿದೆ.

"ಇವುಗಳಲ್ಲಿ ದೇವರು ಸೂರ್ಯನ ಶಿಬಿರವನ್ನು ಇರಿಸಿದಾನೆ. ಅಲ್ಲಿಂದ ಹೊರಟು ಸೂರ್ಯನು ತನ್ನ ಗೃಹದಿಂದ ಬರುವ ಮದುವಣಿಗನಂತೆ ಕಾಣುತ್ತಾನೆ. ಪಂದ್ಯದ ಓಟಕ್ಕೆ ಬಂದ ವೀರಮಗನಂತೆ ನಲಿಯುತ್ತಿರುತ್ತಾನೆ....

"ದೇವರಿಗೆ ಕಾಣದ ವಿಷಯವಿಲ್ಲ.

"ತನ್ನ ತಪ್ಪು ತನಗೇ ತಿಳಿಯುವುದೇ? ನನ್ನಲ್ಲಿರುವ ಗುಪ್ತ ದೋಷಗಳನ್ನು ನೀನು ಹರಿಸು.

"ನನ್ನ ಬಾಯ ಮಾತು, ನನ್ನ ಮನಸ್ಸಿನ ಧ್ಯಾನ ಇವೆರಡೂ ನಿನಗೆ ಒಪ್ಪುವಂಥವಾಗಲಿ ದೇವ. ನನ್ನ ಬಲವೇ ನನ್ನ ರಕ್ಷಿಸುವ ದೊರೆಯೇ.."

ಅವನನ್ನು ಸ್ತೋತ್ರಮಾಡು ಎಂದು ಮನಸ್ಸಿಗೆ ಹೇಳುವುದು ಈ ಗೀತದಲ್ಲಿ ಕಾಣುತ್ತದೆ.

"ಓ ಮನಸ್ಸೇ ದೇವರನ್ನು ಭಜಿಸು. ನನ್ನ ಅಂತಃಕರಣವೇ ಅವನ ಪಾವನ ನಾಮವನ್ನು ನೆನೆ.

"ಹೇ ಆತ್ಮ, ದೇವರನ್ನು ನೆನೆ; ಅವನ ಅನೇಕ ಉಪಕಾರಗಳನ್ನು ಮರೆಯದಿರು.

"ಅವನು ನಿನ್ನ ದೋಷಗಳನ್ನು ಮನ್ನಿಸುತ್ತಾನೆ; ನಿನ್ನ ರೋಗಗಳನ್ನು ವಾಸಿಮಾಡುತ್ತಾನೆ.

"ನಿನ್ನ ಬಾಳನ್ನು ನಷ್ಟವಾಗದಂತೆ ಉಳಿಸುತ್ತಾನೆ. ನಿನಗೆ ದಯೆಯ ದಾಕ್ಷಿಣ್ಯದ ಮುಕುಟವನ್ನು ಇಡುತ್ತಾನೆ.

"ನಿನ್ನ ಬಾಯಿಗೆ ಒಳ್ಳೆಯ ಆಹಾರವನ್ನು ಒದಗಿಸುತ್ತಾನೆ. ಆದರಿಂದ ನಿನ್ನ ಪ್ರಾಯ ಗರುಡನಂತೆ ಉಜ್ಜೀವಿತವಾಗುತ್ತದೆ.

"ದೇವರು ಧರ್ಮವನ್ನು ನಡೆಯಿಸುತ್ತಾನೆ. ಕಷ್ಟಕ್ಕೆ ಸಿಕ್ಕಿದವರಿಗೆ ನ್ಯಾಯವನ್ನು ದೊರಕಿಸುತ್ತಾನೆ. ಅವನು ಕೃಪಾಳು, ದಯಾಶೀಲನು. ಅವನಿಗೆ ಸುಲಭವಾಗಿ ಕೋಪ ಬರುವುದಿಲ್ಲ. ಅವನ ಕ್ಷಮೆ ಅನಂತ.

"ಅವನು ಸದಾ ದಂಡಿಸುವನಲ್ಲ. ಕೋಪವನ್ನು ಎಂದಿಗೂ ಇಟ್ಟು ಕೊಳ್ಳುವನಲ್ಲ.

"ನಮ್ಮ ತಪ್ಪಿಗೆ ಅನುಗುಣವಾಗಿ ಅವನು ನಮ್ಮನ್ನು ಕಂಡಿಲ್ಲ. ನಮ್ಮ ಪಾಪಗಳಿಗೆ ತಕ್ಕ ಫಲವನ್ನು ಅವನು ನಮಗೆ ಕೊಡಲಿಲ್ಲ.

"ಸ್ವರ್ಗವು ಭೂಮಿಯಿಂದ ಹೇಗೆ ಉನ್ನತವೋ ಹಾಗೆ, ದೈವ ಭೀರುವಿನ ವಿಷಯದಲ್ಲಿ ಅವನ ಕೃಪೆ ಉನ್ನತ.

"ಪಶ್ಚಿಮದಿಂದ ಪೂರ್ವ ಎಷ್ಟು ದೂರವೋ ಅಷ್ಟು ದೂರ ಅವನು ನಮ್ಮಿಂದ ನಮ್ಮ ತಪ್ಪುಗಳನ್ನು ದೂಡಿರುವನು.

"ತಂದೆ ಮಕ್ಕಳಲ್ಲಿ ಕನಿಕರಿಸುವಂತೆ ಅವನು ತನ್ನನ್ನಂಜುವವರಿಗೆ ಕನಿಕರ ತೋರುತ್ತಾನೆ.

"ಏಕೆಂದರೆ, ಅವನು ನಮ್ಮ ಸ್ವಭಾವವನ್ನು ಬಲ್ಲನು. ನಾವು ಹುಡಿ ಮಣ್ಣೆಂದು ಅವನಿಗೆ ನೆನಪು ಉಂಟು.

"ಮಾನವನ ಮಾತೇನು? ಬಾಳು ಹುಲ್ಲಿಗೆ ಸಮ. ಹೊಲದ ಹೂವಿನಂತೆ ಅವನ ಮೆರೆತ. ಗಾಳಿ ಬೀಸಿದರೆ ಸಾಕು, ಅದರ ಕೆಲಸ ಮುಗಿಯಿತು; ಅದರ ಸ್ಥಳದಲ್ಲಿ ಅದರ ಗುರುತಿರುವುದಿಲ್ಲ.

"ಆದರೆ, ದೇವರ ಕೃಪೆ ಅವನನ್ನು ಅಂಜುವವರಿಗೆ ಅನಾದಿಯಾದದ್ದು, ಅನಂತವಾದದ್ದು. ಅವನ ರಕ್ಷೆ ಅವರ ಮೊಮ್ಮಕ್ಕಳು ಮರಿಮಕ್ಕಳು ಗಳನ್ನು ಕೂಡ ಬಿಡುವುದಿಲ್ಲ.

"ಪ್ರಭುವನ್ನು ಭಜಿಸು, ಸೃಷ್ಟಿಯೇ ವಿಶ್ವವೇ; ಓ ನನ್ನ ಆತ್ಮವೇ ಪ್ರಭುವನ್ನು ಭಜಿಸು."

ತುಂಬಿದ ಒಂದು ಜೀವಮಾನವೆಲ್ಲ ಬೆಳೆದು ಬೇರೂರಿದ ನಂಬಿಕೆ ಈ ಗೀತಗಳಲ್ಲಿ ವ್ಯಕ್ತವಾಗಿದೆ.

"ಹೇ ನನ್ನ ದೈವನೆ, ಹೇ ನನ್ನ ಪ್ರಭುವೇ, ನಾನು ನಿನ್ನನ್ನು ಸ್ತೋತ್ರಮಾಡುತ್ತೇನೆ. ನಿನ್ನ ನಾಮವನ್ನು ಎಂದೆಂದಿಗೂ ಹೊಗಳುತ್ತೇನೆ.

"ನಾನು ನಿನ್ನನ್ನು ದಿನದಿನವೂ ಹೊಗಳುತ್ತೇನೆ. ನಿನ್ನ ಹೆಸರನ್ನು ಎಂದೆಂದಿಗೂ ಸ್ತೋತ್ರಮಾಡುತ್ತೇನೆ.

"ನಮ್ಮ ಪ್ರಭುವಾದವನು ಮಹತೋ ಮಹೀಯನು, ಮಹಾ ಸ್ತೋತ್ರಾರ್ಹನು. ಅವನ ಮಹಿಮೆ ಎನ್ನುವುದು ಅಚಿಂತ್ಯವಾದದ್ದು.

"ಒಂದು ತಲೆಮಾರು ಇನ್ನೊಂದು ತಲೆಮಾರಿಗೆ ನಿನ್ನ ಕಥೆಗಳನ್ನು ಹೊಗಳಿ ಹೇಳುತ್ತದೆ; ನಿನ್ನ ಮಹತ್ಕಾರ್ಯಗಳನ್ನು ವಿವರಿಸುತ್ತದೆ.

"ದೇವರು ಕರುಣಾಶೀಲನು, ಕೃಪಾಸಾಗರನು; ಕೊಂಚಕ್ಕೆ ಕೋಪಿಸನು; ದಯೆಯಲ್ಲಿ ಅನಂತ.

"ದೇವರಿಗೆ ಎಲ್ಲರಲ್ಲೂ ಕರುಣೆಯಿದೆ. ಅವನ ಸೃಷ್ಟಿಯ ಮೇಲೆಲ್ಲ ಅವನ ಕೃಪೆ ಕಾಣುತ್ತದೆ.....

"ದೇವರ ದಾರಿಯೆಲ್ಲ ಧರ್ಮದ ದಾರಿ. ಅವನ ಕರ್ಮವೆಲ್ಲ ಪರಿಶುದ್ಧವಾದದ್ದು.

"ಕರೆಯುವವರಿಗೆಲ್ಲ ಅವನು ಹತ್ತಿರದಲ್ಲಿರುವನು. ನಿಜವಾಗಿ ಕರೆಯುವರಿಗೆ.

"ಅವನಿಗೆ ಹೆದರಿ ನಡೆಯುವವರ ಕೋರಿಕೆಗಳನ್ನು ಅವನು ಸಲಿಸುವನು. ಅವರ ಮೊರೆಯನ್ನು ಕೇಳಿ ಅವರನ್ನು ರಕ್ಷಿಸುವನು.

"ಅವನು ತನ್ನ ಭಕ್ತರನ್ನೆಲ್ಲ ಸಲಹುವನು, ದುರ್ಮಾರ್ಗರನ್ನೆಲ್ಲ ನಾಶಮಾಡುವನು.

"ನನ್ನ ನಾಲಗೆ ಅವನ ಸ್ತೋತ್ರವನ್ನು ಮೊಳಗುತ್ತದೆ. ಎಲ್ಲ ಜೀವಗಳೂ ಅವನ ಪಾವನ ನಾಮವನ್ನು ಎಂದೆಂದಿಗೂ ಸ್ತುತಿಸಲಿ.

"ದುರ್ಮಾರ್ಗರನ್ನು ನೋಡಿ ಕಾತರನಾಗಬೇಡ. ದುರಾಚಾರಿಗಳನ್ನು ನೋಡಿ ಕರುಬಬೇಡ. ಹುಲ್ಲಿನಂತೆ ಅವರು ಶೀಘ್ರದಲ್ಲೇ ಕುಯ್ಲಿಗೆ ಬರುತ್ತಾರೆ; ಹಸುರಾಗಿರುವ ಗಿಡದಂತೆ ಒಣಗುತ್ತಾರೆ.

"ದೇವರನ್ನು ನಂಬು, ಸನ್ಮಾರ್ಗದಲ್ಲಿರು; ಸ್ಥಿರವಾಗಿ ನಿಲ್ಲುವೆ; ಉಂಡು ತಣಿಯುವೆ.

"ದೇವರಲ್ಲಿ ಆನಂದಪಡು. ಅವನು ನಿನ್ನ ಮನದ ಅಭೀಷ್ಟಗಳನ್ನು ಕೊಡುವನು......

"ಸನ್ಮಾರ್ಗನಾದವನ ಸ್ವಲ್ಪವಾದ ಬದುಕು ಬಹು ಮಡಿಯ ದುರ್ಜನರ ಸಿರಿಗಿಂತ ಲೇಸು. ಏಕೆಂದರೆ, ದೇವರು ದುಷ್ಟ ಜನರ ತೋಳನ್ನು ಮುರಿಯುತ್ತಾನೆ; ಸತ್ಯವಂತನನ್ನು ಎತ್ತಿ ಹಿಡಿಯುತ್ತಾನೆ.

"ಒಳ್ಳೆಯವನ ನಡತೆಯನ್ನು ಹೆಜ್ಜೆ ಹೆಜ್ಜೆಗೂ ಕಾಯುತ್ತಾನೆ. ಅವನ ನಡತೆಯಿಂದ ದೇವರು ಸಂತೋಷಪಡುತ್ತಾನೆ.

"ಅಂಥವನು ಬಿದ್ದರೂ ಬಿದ್ದೇ ಹೋಗುವುದಿಲ್ಲ. ದೇವರು ಅವನನ್ನು ಕೈಹಿಡಿದು ಎತ್ತುತ್ತಾನೆ.

"ನಾನು ಹುಡುಗನಾಗಿದ್ದೆ, ಈಗ ಮುದುಕನಾಗಿದೇನೆ. ಇಷ್ಟು ಕಾಲದಲ್ಲಿ ಸತ್ಯವಂತನು ದಿಕ್ಕಿಲ್ಲದೆ ಹೋದದ್ದನ್ನು ನೋಡಲಿಲ್ಲ; ಅವನ ಮಕ್ಕಳು ಭಿಕಾರಿಗಳಾದದ್ದನ್ನು ಕಾಣಲಿಲ್ಲ."

೩

ಇಲ್ಲಿ ಉದ್ಧರಿಸಿರುವ ಗೀತೆಗಳ ಭಾವ ನಮ್ಮ ಜನರಿಗೆ ಬಹಳ ಹಳೆಯದಾಗಿ ಕಾಣಬೇಕು. ದೇವರು ಮಹಾಮಹಿಮನು; ಭಕ್ತರನ್ನು ಸಲಹುವನು; ವಿರೋಧಿಗಳನ್ನು ನಿಗ್ರಹಿಸುವನು. ಅವನು ಸರ್ವಜ್ಞನು, ಸರ್ವವ್ಯಾಪಿ, ಸರ್ವಶಕ್ತನು, ದಯಾಶೀಲನು. ಅವನನ್ನು ನಂಬಿ ಕೆಟ್ಟವರಿಲ್ಲ. ಅವನೆದುರಿಗೆ ತಪ್ಪು ಮಾಡದ ಮನುಷ್ಯರಿಲ್ಲ. ಆದರೆ ಅವನು ಕ್ಷಮಾಶೀಲನು; ತಪ್ಪನ್ನು ಒಪ್ಪಿಕೊಂಡರೆ ಮನ್ನಿಸುವನು. ನಮ್ಮನ್ನು ಜೀವನದಲ್ಲಿ ನಡೆಯಿಸುವನು ಅವನು; ಅವನೇ ನಮ್ಮನ್ನು ಒಳ್ಳೆಯ ದಾರಿಯಲ್ಲಿ ಬಿಡಬೇಕು. ಇದೆಲ್ಲ ನಮ್ಮ ಸೀಮೆಯ ಭಕ್ತಪಂಥದ ಮಾತುಗಳೇ. ನ್ಯಾಯವಾಗಿ ನೋಡಿದರೆ ಎಲ್ಲ ಸೀಮೆಯಲ್ಲಿಯೂ ಈ ಮಾತುಗಳನ್ನು ಹೇಳುವ ಪಂಥವೊಂದು ಇದ್ದೇ ಇದೆ. ಇದು ಬಹು ಹಳೆಯ ಪಂಥ. ನಮ್ಮಲ್ಲಿ ಭಕ್ತಿಮಾರ್ಗ ಪ್ರಹ್ಲಾದನ ಕಾಲದಿಂದಲೂ ಪ್ರಸಿದ್ಧವಾದದ್ದು. ಯೇಹೂದ್ಯರ ಈ ಮಾರ್ಗ ಡೇವಿಡ್ಡನಿಗೆ ಮೊದಲೇ ಇತ್ತೆಂದು ಧಾರಾಳವಾಗಿ ಹೇಳಬಹುದು. ಹಾಗೆ ನೋಡಹೋದರೆ, ನಮ್ಮ ಸೀಮೆಗೂ ಯೇಹೂದ್ಯರ ಸೀಮೆಗೂ ಆ ಕಾಲದಲ್ಲಿ ಸಂಬಂಧಗಳಿದ್ದಿರಬಹುದು. ಒಂದೇ ಭಾವವೇ ಇಲ್ಲಿಂದ ಅಲ್ಲಿ ಅಲ್ಲಿಂದ ಇಲ್ಲಿ ಹರಡಿತು ಎಂದು ಊಹಿಸುವುದೂ ತಪ್ಪಾಗಲಾರದು. ಈ ಗೀತೆಗಳು ತಾಳ ಮೃದಂಗಗಳೊಡನೆ ಹಾಡುತ್ತಿದ್ದವೆಂದು ತಿಳಿಯುತ್ತದೆ. ಅದರ ಜೊತೆಗೆ ನೃತ್ಯವೂ ಇರುತ್ತಿದ್ದಿತೆಂದು ಕಾಣುತ್ತದೆ. ಡೇವಿಡ್ ಮಹಾರಾಜನೇ ಒಂದು ಸಲ ದೇವರ ಉತ್ಸವದಲ್ಲಿ

ಕುಣಿಯುತ್ತ ಹಾಡುತ್ತ ಬೀದಿಯಲ್ಲಿ ಬಂದನೆಂದು ಬೈಬಲಿನಲ್ಲಿ ಹೇಳಿದೆ. ಇದರಿಂದಲೂ ಈ ಸಂಪ್ರದಾಯವು ನಮ್ಮ ವೈಷ್ಣವ ಅಥವಾ ಶೈವಭಕ್ತ ಸಂಪ್ರದಾಯಗಳನ್ನು ಬಹಳವಾಗಿ ಹೋಲುತ್ತದೆಯೆಂದು ಸ್ಪಷ್ಟ ವಾಗುತ್ತದೆ.

ಕರ್ಣಾಟಕದ ವೈಷ್ಣವ ಗೀತೆಗಳಲ್ಲಿ ಉತ್ತಮವಾದುವುಗಳಲ್ಲಿ ಕಾಣು ವಂತೆ ಇಲ್ಲಿಯೂ ಕಾವ್ಯ ಸೌಂದರ್ಯ ಕಾಣುತ್ತದೆ. ನಮ್ಮ ವೈಷ್ಣವ ಗೀತೆಗಳು ಮಾನವನ ಇತಿಹಾಸದಲ್ಲಿ ಈ ಗೀತೆಗಳಾದ ಹಲವು ಶತಮಾನಗಳ ಮೇಲೆ ಬಂದುವು. ಅಲ್ಲದೆ ಜನತೆಯೂ ಬೇರೆ. ಈ ಕಾರಣಗಳಿಂದ ಈ ಗೀತೆಗಳಲ್ಲಿ ವೈಷ್ಣವ ಗೀತೆಗಳಿಂದ ಬೇರೆಯ ರೀತಿಯ ಒಂದು ಶಕ್ತಿ ಇದೆ. ಇಲ್ಲಿಯ ದೇವರು ನಿಷ್ಠುರದೈವ. ಇಲ್ಲಿಯ ಭಾವನೆ ಕಠಿನವಾದದ್ದು, ಹಗೆಯೆನ್ನುವವನಿಗೆ ಕೇಡನ್ನು ಬಯಸತಕ್ಕದ್ದು. ಆದರೂ ಇದು ಉತ್ತಮ ವಾದ ಗೀತವೇ. ಇಲ್ಲಿಯ ಉಪಮೆಗಳು ವಿಸ್ತಾರ ಉನ್ನತಿಗಳನ್ನು ಸೂಚಿಸುವುವು; ಉಕ್ತಿಯ ರೀತಿ ನಮ್ಮವರ ರೀತಿಯಿಂದ ಸ್ವಲ್ಪಮಟ್ಟಿಗೆ ಬೇರೆಯಾದರೂ ಉತ್ತಮವಾದದ್ದು. ಮಾನವನ ಹೃದಯದ ಮೂಲ ಭಾವಗಳನ್ನು ಕುರಿತ ಕಾರಣದಿಂದ, ಇದು ಮನಸ್ಸಿಗೆ ತೃಪ್ತಿಯನ್ನು ತರುತ್ತದೆ, ಶಾಂತಿಯನ್ನು ತರುತ್ತದೆ. ವೈಷ್ಣವ ಗೀತಗಳಂತೆಯೇ ಈ ಗೀತಗಳೂ ಏಕ ಕಾಲದಲ್ಲಿ ಉತ್ತಮವಾದ ಕಾವ್ಯ ಉತ್ತಮವಾದ ತತ್ತ್ವ ವಿಚಾರ ಮತದ ಉತ್ತಮ ಭಾಗ ಇವನ್ನು ಒಳಗೊಂಡಿವೆ.

ಈ ಗೀತಗಳನ್ನು ಪರಿಶೀಲಿಸುವವರಿಗೆ ಮಾನವನ ಚರಿತ್ರೆಯಿಂದ ನಿರ್ಧಾರವಾಗುವ ಇನ್ನೊಂದು ವಿಷಯ ಚೆನ್ನಾಗಿ ತಿಳಿಯುವುದು. ದೇಶ ಬೇರೆಯಾಗಬಹುದು, ಕಾಲ ಬೇರೆಯಾಗಬಹುದು, ವರ್ತಮಾನ ಬೇರೆ ಯಾಗಬಹುದು; ಆದರೆ ಮಾನವನ ಚಿತ್ತವೃತ್ತಿ ಮೂಲದಲ್ಲಿ ಒಂದೇ. ಅವನು ಭಕ್ತನಾಗಬೇಕು, ಜ್ಞಾನಿಯಾಗಬೇಕು, ಕರ್ಮಮಾಡಬೇಕು; ಇವುಗಳ ತತ್ತ್ವವನ್ನು ವಿಚಾರಮಾಡಬೇಕು; ಬಾಳನ್ನು ಸರಿಯಾಗಿ ಬಾಳಬೇಕು. ಇಲ್ಲಿಯವರು ನಮ್ಮ ಮತಕ್ಕೆ ಸಮಾನವಿಲ್ಲವೆನ್ನುವುದು, ಅಲ್ಲಿಯವರು ತಮ್ಮ ಮತಕ್ಕೆ ಸಮಾನವಿಲ್ಲವೆನ್ನುವುದು ಎರಡೂ ತಪ್ಪು. ಎಲ್ಲ ಮತವೂ ಒಂದು ಪ್ರಯತ್ನದ ಬೇರೆಬೇರೆ ರೂಪು. ಮಾನವನು

ಸತ್ಯಾನಂದ ಸಮನ್ವಿತವಾದ ಜೀವನವನ್ನು ಇಲ್ಲಿಯೂ ಅರಸುತ್ತಿರುವನು, ಅಲ್ಲಿಯೂ ಅರಸುತ್ತಿರುವನು. ಅದು ಇವನಿಗೂ ಕಾಣುವುದು, ಅವನಿಗೂ ಕಾಣುವುದು. ಇವನಿಗೆ ಹೆಚ್ಚಾಗಿ, ಅವನಿಗೆ ಕಡಿಮೆಯಾಗಿ; ಇವನಿಗೆ ಒಂದು ಮುಖದಿಂದ, ಅವನಿಗೆ ಇನ್ನೊಂದು ಮುಖದಿಂದ. ಇದನ್ನು ತಿಳಿದು ಎಲ್ಲ ಮತಗಳವರೂ ತಮ್ಮೆಲ್ಲ ಮತಗಳ ಮುಖ್ಯೋದ್ದೇಶವನ್ನು ಕುರಿತು ಯೋಚನೆ ಮಾಡುವುದಾದರೆ ಲೋಕದಲ್ಲಿ ಮತಗಳ ಜಗಳಕ್ಕೆ ಕಾರಣವಿಲ್ಲ. ಎಲ್ಲಮತಗಳೂ ನಿತ್ಯವಾದ ಒಂದು ಧರ್ಮದ ಶಾಖೆಗಳಾಗಿ ಕಾಣುವುವು. ಎಲ್ಲ ದೇವರುಗಳೂ ಒಬ್ಬ ದೇವರೇ ಎಂದು ತೋರುವುದು. ಮಾನವ ವರ್ಗವೆಲ್ಲ ಒಂದು ಕುಟುಂಬವಾಗುವುದು.

---

# ಎಪಿಕ್ಟಿಟೆಸ್ ಗುರುವಿನ ಉಪದೇಶ

೧

ಪಾಶ್ಚಾತ್ಯ ಸಂಸ್ಕೃತಿಯ ತತ್ತ್ವ ವಿಚಾರಕ್ಕೆ ತಳಹದಿಯನ್ನು ಹಾಕಿದವರು ಗ್ರೀಕ್ ಜನರು. ಈ ತತ್ತ್ವಜ್ಞರ ಆದ್ಯಪ್ರಭುವಾದ ಸಾಕ್ರಟೀಸನ ಹೆಸರನ್ನು ಕೇಳದವರಿಲ್ಲ. ಇವನ ನಂತರವೂ ಗ್ರೀಸ್ ದೇಶದಲ್ಲಿ ಶಕ್ತರಾದ ಅನೇಕ ಜಿಜ್ಞಾಸುಗಳು ಹುಟ್ಟಿದರು. ಗ್ರೀಕರ ರಾಜ್ಯಗಳು ಕೆಟ್ಟುಹೋಗಿ ರೋಮ್ ನಗರವು ಹಿರಿದಾದ ಕಾಲಕ್ಕೆ ಗ್ರೀಕರ ತತ್ತ್ವವು ರೋಮನರ ರಾಷ್ಟ್ರದಲ್ಲಿ ಆಶ್ರಯವನ್ನು ಸಂಪಾದಿಸಿತು. ಹೀಗೆ ರೋಮನ್ ಜನರಲ್ಲಿ ತತ್ತ್ವವನ್ನು ಉಪದೇಶಿಸಿದವರಲ್ಲಿ ಎಪಿಕ್ಟಿಟಸ್ ಎಂಬಾತನು ಪ್ರಸಿದ್ಧನು. ಈತನು ದಾಸನಾಗಿ ಹುಟ್ಟಿ ಬಿಡುಗಡೆ ಹೊಂದಿದ್ದವನು. ಆಗಣ ಕಾಲದಲ್ಲಿ ರೋಮಿನಲ್ಲಿ ಪುಣ್ಯವಂತರೆಲ್ಲಾ ತತ್ತ್ವೋಪದೇಶಕರ ಬಳಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಎಪಿಕ್ಟಿಟಸನ ಮಾತುಗಳನ್ನು ಕೇಳಿದ ಶಿಷ್ಯನೊಬ್ಬನು ಆತನ ಉಪದೇಶದ ಸಾರಾಂಶವನ್ನು ಬರೆದಿಟ್ಟನು. ಈ ಬರೆಹದಿಂದ ಎಪಿಕ್ಟಿಟಸನ ಉಪದೇಶದ ಮುಖ್ಯ ಭಾಗವೂ, ಅವನು ಉಪದೇಶದಲ್ಲಿ ಅನುಸರಿಸುತ್ತಿದ್ದ ರೀತಿಯೂ ನಮಗೆ ಚೆನ್ನಾಗಿ ಕಾಣುತ್ತದೆ. ಅವನ ವಿಷಯವು ಕಾಲದೇಶಗಳ ಭೇದವಿಲ್ಲದೆ ಎಲ್ಲ ಸಂದರ್ಭಗಳಲ್ಲಿಯೂ ನೆನೆಯಬೇಕಾದದ್ದು; ಹೇಳಿರುವ ರೀತಿಯೂ ಕಾಲದೇಶಗಳ ಭೇದವಿಲ್ಲದೆ ಎಲ್ಲ ಸಂದರ್ಭದಲ್ಲಿಯೂ ರುಚಿಸತಕ್ಕದ್ದು. ಈ ಉಪನ್ಯಾಸದಲ್ಲಿ ನಮ್ಮ ಜನರಿಗೆ ಇದರ ಪರಿಚಯವನ್ನು ಸ್ವಲ್ಪಮಟ್ಟಿಗೆ ಮಾಡಿಕೊಡುವುದಕ್ಕೆ ಯತ್ನಮಾಡಿದೆ.

೨

ಎಪಿಕ್ಟಿಟಸನ ಉಪದೇಶದ ಮೊದಲ ಸೂತ್ರ ಮನುಷ್ಯನ ಮುಖ್ಯ ಲಕ್ಷಣ ಬುದ್ಧಿ ಎನ್ನುವುದು. ಬುದ್ಧಿಯಿಂದ ಮನುಷ್ಯನು ನಿಜವಾದ ಸುಖವನ್ನು ಸಾಧಿಸಬಲ್ಲನು, ಅದಿಲ್ಲದೆ ಸಾಧಿಸುವುದು ಸಾಧ್ಯವಲ್ಲ, ಎಂದು ಇವನು ಹೇಳುತ್ತಾನೆ.

"ಮನುಷ್ಯನಿಗೆ ಉಳಿದ ಎಲ್ಲಾ ಆಸ್ತಿಗಿಂತಲೂ ಅಮೂಲ್ಯವಾದ ಆಸ್ತಿ ಅವನ ಬುದ್ಧಿ. ಅವನ ಬದುಕಿನ ಸಕಲ ಸಂದರ್ಭಗಳಲ್ಲಿಯೂ ಸೌಖ್ಯಕ್ಕೆ ಅದು ಮೂಲ, ಅದೇ ಸೌಖ್ಯದ ಸಾಧನ. ಎಲ್ಲಾ ಸಂದರ್ಭಗಳಿಗಿಂತಲೂ ವಿಷಮವೆಂದು ಹೇಳಬಹುದಾದದ್ದು ಮರಣಕಾಲ. ಹಾಗೆ ಮರಣ ಒದಗಿದಾಗ ಕೂಡ ಬುದ್ಧಿಯಿಂದ ಶಾಂತಿ ದೊರೆಯುವುದು. ಚಕ್ರವರ್ತಿಯು ತತ್ತ್ವಜ್ಞಾನಿಯನ್ನು ಯಾವುದೋ ಒಂದು ವಿಷಯದಲ್ಲಿ ಪ್ರಶ್ನೆ ಕೇಳಿದಾಗ ಅವನು ಹೇಳುವುದಿಲ್ಲವೆಂದನು. 'ಹೇಳದಿದ್ದರೆ ನಾನು ನಿನ್ನನ್ನು ಸರಪಳಿಯಿಂದ ಬಿಗಿಸುತ್ತೇನೆ.' 'ನನ್ನನ್ನು ಹೇಗೆ ಬಿಗಿಸುವೆ? ನನ್ನ ಕಾಲನ್ನು ಬಿಗಿಸುವೆ. ನನ್ನ ಬುದ್ಧಿಯನ್ನು ಬಿಗಿಸುವೆಯಾ? ದೇವರು ಕೂಡ ಕೊಟ್ಟದ್ದಾದಮೇಲೆ ಮನುಷ್ಯನ ಬುದ್ಧಿಯನ್ನು ಬಿಗಿಸಲಾರನು.' 'ನಿನ್ನನ್ನು ಸೆರೆಯಲ್ಲಿಡುತ್ತೇನೆ.' 'ನನ್ನದೆಂಬ ಈ ದೇಹವನ್ನಲ್ಲವೇ? ನೀನು ಹೇಳುವುದು.' 'ನಿನ್ನ ತಲೆಯನ್ನು ಕಡಿಸುತ್ತೇನೆ.' 'ಯಾಕಪ್ಪ? ಪ್ರಪಂಚದಲ್ಲಿ ಕಡಿಯುವುದಕ್ಕೆ ಆಗದಿರುವುದು ನನ್ನ ತಲೆ ಒಂದೇ ಎಂದು ನಾನು ಎಂದಾದರೂ ಹೇಳಿದೆನೇನು?' ಪ್ರಾಜ್ಞರು ಹೀಗೆ ಯೋಚನೆ ಮಾಡಬೇಕು. ಅಗ್ರಿಪಿನಸ್ ಎಂಬಾತನ ವ್ಯವಹಾರ ಒಂದು ವಿಚಾರಣೆಗೆ ಬಂದ ಸಮಯದಲ್ಲಿ ಸೇವಕರು ಬಂದು ವಿಚಾರಣೆ ಆರಂಭವಾಯಿತು ಎಂದು ಹೇಳಿದರಂತೆ. ಆಗ ಅವನು ವ್ಯಾಯಾಮಕ್ಕೆ ಹೋಗಿ ಸ್ನಾನಮಾಡುವ ಹೊತ್ತು. ವಿಚಾರಣೆಯಾಗಲಿ ನಾವು ಹೋಗಿ ವ್ಯಾಯಾಮ ಮಾಡೋಣ ಎಂದನಂತೆ. ವ್ಯಾಯಾಮ ಮುಗಿಯುವ ವೇಳೆಗೆ ನಿನಗೆ ದಂಡನೆಯನ್ನು ವಿಧಿಸಿದ್ದಾರೆ ಎಂದು ವರ್ತಮಾನ ಬಂತು. 'ದೇಶೋಚ್ಚಾಟನೆಯೊ? ಮರಣವೊ?' 'ಉಚ್ಚಾಟನೆ.' 'ಆಸ್ತಿ?' 'ಅದನ್ನು ಕಿತ್ತುಕೊಳ್ಳುವುದಿಲ್ಲ.' 'ಒಳ್ಳೆಯದಾಯಿತು. ಬೇರೆ ಕಡೆ ಹೋಗಿ ಊಟಮಾಡೋಣ'."

ಸಣ್ಣ ವಿಷಯದಲ್ಲೂ ದೊಡ್ಡ ವಿಷಯದಲ್ಲೂ ಮನುಷ್ಯನು ಒಂದೇ ರೀತಿಯಾಗಿ ಧೀರನಾಗಿರಬಹುದು. ಹೀಗೆ ಧೀರನಾಗಿರುವವನೇ ಮನುಷ್ಯ ವರ್ಗದಲ್ಲಿ ಉತ್ತಮನಾದವನು. ಹೀಗೆ ಬುದ್ಧಿಗೆ ಸದಾ ವಿಧೇಯನಾಗಿ ನಡೆಯುವವನಿಗೆ ಸೋಲು ಎನ್ನುವುದಿಲ್ಲ. ಪ್ರಜ್ಞೆಯಿಲ್ಲದಾಗ ಕೂಡ ಇಂಥವನು ಸರಿಯಾಗಿಯೇ ನಡೆದುಕೊಳ್ಳುವನು.

"ಅಜೇಯನು ಯಾರು? ತನ್ನ ಆಂತರ್ಯಕವಲ್ಲದ ಯಾವ ಒಂದು ವಿಷಯದಿಂದಲೂ ಭೀತನಾಗದವನು. ಒಂದೊಂದು ವಿಷಯದಲ್ಲಿಯೂ ಅವನು ಹೇಗೆ ನಡೆದುಕೊಳ್ಳುತ್ತಾನೆಂದು ನಾನು ನೋಡುತ್ತೇನೆ. ಸಣ್ಣ ವಿಷಯದಲ್ಲಿ ದೊಡ್ಡ ವಿಷಯದಲ್ಲಿ. ಸಣ್ಣದರಲ್ಲಿ ಅವನು ಗೆದ್ದನೋ? ಕಳದಲ್ಲಿ ಅವನಿಗೆ ಮೊದಲು ಗೆಲವು. ಸ್ವಲ್ಪ ಹಣವನ್ನು ಕೊಡುವೆನೆಂದೆ, ಅವನು ಅದಕ್ಕೆ ಸೋಲುವುದಿಲ್ಲ. ಒಂದು ಹೆಣ್ಣನ್ನು ಕೊಡುವೆನೆಂದರೆ? ಇದೇ ಮಾತನ್ನು ಯಾರೂ ಇಲ್ಲದಾಗ ಹೇಳಿದರೆ? ಹೊಗಳುವೆನೆಂದರೆ? ಬಯ್ಯುವೆನೆಂದರೆ? ಕೊಲ್ಲುವೆನೆಂದರೆ? ಅಜೇಯನಾದವನು ಇಷ್ಟನ್ನೂ ತಡೆಯುವನು. ಬುದ್ಧಿಯಿಂದಿರುವಾಗ ಮಾತ್ರವಲ್ಲ; ಮದ್ಯವನ್ನು ಕುಡಿದು ಬುದ್ಧಿ ತಪ್ಪಿದ್ದರೂ ಅವನು ತಪ್ಪನ್ನು ಮಾಡನು. ನಿದ್ರೆಯಲ್ಲಿಯೂ ಕೂಡ ಅವನು ತಪ್ಪನ್ನು ಎಣಿಸನು. ನೀತಿಯ ಪಥದಲ್ಲಿ ಇಷ್ಟು ಸ್ಥಿರವಾಗಿ ನಿಂತವನೇ ಅಜೇಯನು."

ಬುದ್ಧಿಗೆ ಸರಿಯಾಗಿ ನಡೆದುಕೊಳ್ಳದ ಮನುಷ್ಯನು ಮನುಷ್ಯನೇ ಅಲ್ಲ.

"ಮನುಷ್ಯನು ಮನುಷ್ಯನಾಗಿರಬೇಕಾದರೆ ಮನುಷ್ಯತ್ವದ ಮುಖ್ಯ ಲಕ್ಷಣವಾದ ಬುದ್ಧಿಗೆ ಅನುಗುಣವಾಗಿ ನಡೆಯಬೇಕು. ಅವನವನು ತಿಳಿದಷ್ಟು ಅವನವನು ಆಚಾರಣೆಯಲ್ಲಿ ತಂದರೆಯೇ ಬುದ್ಧಿಗೆ ಅನುಗುಣವಾಗಿ ನಡೆದಂತಾಗುವುದು. ನಮ್ಮಲ್ಲಿ ಅನೇಕರು ತತ್ತ್ವಗಳನ್ನು ಬಾಯಲ್ಲಿ ಹೇಳುವೆವು; ಕಾರ್ಯದಲ್ಲಿ ತರುವುದಿಲ್ಲ. ಆಗ್ಗೆ ತತ್ತ್ವವು ವೇಷವಾಯಿತೇ ಹೊರತು ಅದನ್ನು ಹೇಳಿದವನು ತತ್ತ್ವಜ್ಞನಾಗಲಿಲ್ಲ. ಮನುಷ್ಯನೇ ಆಗದಿರುವನು ತತ್ತ್ವಜ್ಞನೆಂದು ಕರೆದುಕೊಳ್ಳುವ ಸ್ಥಿತಿಯಿದು. ಒಂದು ಘಡಿಯ ಭಾರವನ್ನು ಹೊರದವನು ಒಂದು ಮಣ ಭಾರದ ಗದೆಯನ್ನು ಎತ್ತಿದಂತೆ."

ಬುದ್ಧಿಗೆ ಸರಿಯಾಗಿ ನಡೆದುಕೊಳ್ಳುವವನು ತತ್ತ್ವಜ್ಞನು. ಬುದ್ಧಿಯ ಮಾತನ್ನಾಡಿದ್ದರಿಂದ, ತತ್ತ್ವದ ವಿಚಾರವನ್ನು ಮಾತಿನಲ್ಲಿ ಚೆನ್ನಾಗಿ ಮಾಡಿದ್ದರಿಂದ ಮನುಷ್ಯನು ತತ್ತ್ವಜ್ಞನಾಗಲಾರನು.

"ತತ್ತ್ವಜ್ಞನು ಯಾರು? ತತ್ತ್ವವೆಂದು ತಾನು ನುಡಿಯುವ ನೀತಿಗೆ ಸರಿಯಾಗಿ ತಿದ್ದಿರುವ ಮನುಷ್ಯನನ್ನು, ರೋಗದಲ್ಲಿದ್ದರೂ ಸುಖಿಯಾಗಿರುವನನ್ನು, ನನಗೆ ತೋರು. ಅಪಾಯದಲ್ಲಿ ಸುಖಿಯಾಗಿರುವವನನ್ನು,

ಸಾಯುತ್ತಾ ಸುಖಿಯಾಗಿರುವವನನ್ನು, ದೇಶೋಚ್ಚಾಟನವಾದಾಗ ಸುಖಿಯಾಗಿರುವವನನ್ನು ನನಗೆ ತೋರು. ತೋರಿಸು ಅವನನ್ನು ನನಗೆ. ಅವನು ತತ್ತ್ವಜ್ಞನು. ಅವನನ್ನು ನೋಡಲು ನನಗೆ ಆಸೆ ಇದೆ. 'ಅಯ್ಯೋ ಇಂಥ ತತ್ತ್ವಜ್ಞನು ಇಲ್ಲ.' ಹೋಗಲಿ, ಈ ಸ್ಥಿತಿಗೆ ಬರುವುದಕ್ಕೆ ಯತ್ನಿಸುತ್ತಿರುವವನನ್ನು, ಈ ಸನ್ಮಾರ್ಗದಲ್ಲಿ ಕಾಲಿಟ್ಟು ನಡೆಯುತ್ತಿರುವವನನ್ನು ತೋರಿಸು. ಆಗ್ಯೆ ತತ್ತ್ವಜ್ಞನಾಗುವೆನೆನ್ನುವ ಮನುಷ್ಯನನ್ನು ನಾವು ಕಂಡಂತಾಗುವುದು?"

ವಿಚಾರಶೀಲನಾದ ಮನುಷ್ಯನಿಗೆ ಜೀವನದ ಸಣ್ಣ ಕಷ್ಟಗಳು, ದೊಡ್ಡ ಕಷ್ಟಗಳು ಅವಿಸಹ್ಯವಾಗುವುದಿಲ್ಲ. ಸಣ್ಣದೊಡ್ಡ ಐಶ್ವರ್ಯಗಳೂ ಅಪೇಕ್ಷಣೀಯವಾಗುವುದಿಲ್ಲ.

"ಹಸಿವು, ನೋವು, ಬಡತನ—ಇವು ಜನರಿಗೆ ದುಃಖಕರವೆಂದು ತೋರುವುವು. ಪ್ರಾಜ್ಞನು ಅವುಗಳನ್ನು ಹಾಗೆ ಎಣಿಸುವುದಿಲ್ಲ. ಸಾಮಾನ್ಯರು ಅವನನ್ನು ನೋಡಿ ಅಯ್ಯೋ ಪಾಪ, ಇವನು ಕಷ್ಟಪಡುತ್ತಾನೆ ಎನ್ನಬಹುದು. ಪ್ರಾಜ್ಞನು ಇದಕ್ಕೆ ಒಪ್ಪಬೇಕಾದುದಿಲ್ಲ. ಜ್ವರವಿಲ್ಲದವನನ್ನು ಇತರರು ನೋಡಿ, ಅಯ್ಯೋ ಪಾಪ, ಜ್ವರದಲ್ಲಿ ನರಳುತ್ತಿದ್ದೀಯೆ ಎಂದರೆ ಅವನಿಗೆ ಆದದ್ದೇನು? ಅದರಂತೆಯೇ ಬಡತನದಿಂದ ಕಷ್ಟಪಡುತ್ತಿದ್ದೀಯೆ ಎಂದು ಹೇಳಿದ ಮಾತ್ರಕ್ಕೆ ತತ್ತ್ವಜ್ಞನಿಗೆ ಬಡತನವೂ ಕಷ್ಟವಾಗಲಾರದು. ಚಕ್ರವರ್ತಿಯು ಗೌರವಿಸುವ ಕಾರಣದಿಂದ ಯಾರನ್ನಾದರೂ ಜನರು ಪುಣ್ಯಶಾಲಿ ಎಂದರೆ ನಾನು ಅವರನ್ನು ಏನು ಪುಣ್ಯ ಎಂದು ಕೇಳುತ್ತೇನೆ. ಇಲ್ಲಿ ಒಂದು ಅಧಿಕಾರ, ಅಲ್ಲಿ ಒಂದು ದೊರೆತನ, ಇದಲ್ಲವೆ ಅವನಿಗೆ ಸಿಕ್ಕುವುದು? ಅಧಿಕಾರದ ಜೊತೆಗೆ ಅದಕ್ಕೆ ಅವಶ್ಯಕವಾದ ಬುದ್ಧಿವಿಕಾಸವೂ ದೊರೆಯುತ್ತಿದೆಯೇನು? ಇಲ್ಲವಾದರೆ ಆ ಅಧಿಕಾರ ನಮಗೇಕೆ? ಯಾರು ಇಷ್ಟು ಕಡಲೆಪುರಿಯನ್ನು ಎರಚುತ್ತಾರೆ? ಮಕ್ಕಳು ಅದನ್ನು ತೆಗೆದುಕೊಳುವುದಕ್ಕೆ ಯತ್ನಿಸುತ್ತವೆ; ಅದಕ್ಕಾಗಿ ಒಂದರೊಡನೊಂದು ಹೊಡೆದಾಡುತ್ತವೆ. ಕಡಲೆಪುರಿಗೆ ಬದಲಾಗಿ ಗಪ್ಪಚಿಪ್ಪನ್ನು ಎಸೆದರೆ ಮಕ್ಕಳು ಕೂಡ ಅದನ್ನು ತೆಗೆದುಕೊಳ್ಳುವುದಕ್ಕೆ

ಹೋಗುವುದಿಲ್ಲ. ಅಧಿಕಾರಗಳನ್ನು ಹಂಚುತ್ತಿದಾರಲ್ಲವೇ? ಮಕ್ಕಳು ಅದಕ್ಕೆ ಓಡುತ್ತವೆ. ಇಲ್ಲಿ ಮಂಡಲೇಶ, ಅಲ್ಲಿ ಅಧಿನಾಯಕ. ಮಕ್ಕಳು ಇದಕ್ಕಾಗಿ ನುಗ್ಗು ನುಗ್ಗು ಮಾಡುತ್ತವೆ. ನಮಗೆ ಇವು ಕಡಲೆಪುರಿ. ಹೌದು, ನೀನು ಕುಳಿತಿರುವಾಗ ನಿನ್ನ ಉಡಲಲ್ಲಿ ಅದು ಸ್ವಲ್ಪ ಬಿದ್ದರೋ. ಹಾಗೆ ಬಿದ್ದರೆ ತೆಗೆದುಕೊಂಡು ತಿನ್ನು. ಕಡಲೆಪುರಿಗೆ ಅಷ್ಟರಮಟ್ಟಿಗೆ ಬೆಲೆಯನ್ನು ಕಟ್ಟಬಹುದು. ಆದರೆ ಅದಕ್ಕಾಗಿ ನಾನೂ ಓಡಿಯಾಡಿ ನನ್ನ ಜೊತೆಯವರೊಂದಿಗೆ ನೂಕಾಡಿದರೆ, ಅದು ಸಿಕ್ಕಿದವರನ್ನು ಪುಣ್ಯಶಾಲಿಯೆಂದರೆ, ನಾನು ಮಾಡುವುದು ಸರಿಯಲ್ಲ."

ಚಿಕ್ಕಂದಿನಲ್ಲಿ ಕಡಲೆಪುರಿ ದೊಡ್ಡದೆಂದು ಕಾಣುವ ಹಾಗೆ ದೊಡ್ಡಂದಿನಲ್ಲಿ ಅಧಿಕಾರ ಐಶ್ವರ್ಯ ದೊಡ್ಡದೆಂದು ಕಾಣುತ್ತದೆ. ನ್ಯಾಯವಾಗಿ ಬೆಲೆ ಕಟ್ಟಿದರೆ ಎರಡೂ ಸಣ್ಣದೇ. ಅದು ದೊಡ್ಡದೆಂದು ಕಾಣುವುದು ನಮಗೆ ತಿಳುವಳಿಕೆ ಕಡಿಮೆಯಾದದ್ದರಿಂದ. ಅದಕ್ಕಾಗಿ ನಾವು ಹೊಡೆದಾಡುವುದು ಕಡಿಮೆ ತಿಳುವಳಿಕೆಯ ಚಿಹ್ನೆ. ಆದ್ದರಿಂದ ವಿಚಾರಶೀಲನು ಅಲ್ಪವಸ್ತುಗಳಲ್ಲಿ ಆಸೆಯನ್ನು ಬಿಡಬೇಕು.

"ನಿನ್ನ ಹೃದಯವನ್ನು ಶೋಧಿಸಿಕೊ. ನಿನ್ನ ಮನಸ್ಸಿನಿಂದ ಆಸೆಯನ್ನು, ಭೀತಿಯನ್ನು, ಈರ್ಷೆಯನ್ನು, ಮಾತ್ಸರ್ಯವನ್ನು, ಕಾಮವನ್ನು ಕಿತ್ತು ಎಸೆ. ದೇವರೊಬ್ಬನೇ ಗತಿ ಎಂದ ಹೊರತು, ಅವನಲ್ಲಿಯೇ ಮನಸ್ಸನ್ನಿಟ್ಟ ಹೊರತು, ಅವನ ಆಜ್ಞೆಗೆ ನೀನು ದಾಸನಾದ ಹೊರತು ಇವುಗಳನ್ನು ಕಿತ್ತೆಸೆಯಲಾರೆ. ಇದನ್ನು ಮಾಡುವುದು ಸುಲಭ. ಇದು ಹೊರತು ನಿನ್ನ ಅಂತರ್ಯಕ್ಕೆ ಸಂಬಂಧಪಡದ ಒಳ್ಳೆಯದೆನ್ನುವ ಯಾವುದಕ್ಕಾಗಲಿ ನೀನು ಅಪೇಕ್ಷೆಪಡುವೆಯಾದರೆ ನೀನು ದುಃಖಕ್ಕೆ ಕೈಯೊಡ್ಡುವೆ. ಶಾಂತಿಯನ್ನು ಹೊರಗೆ ಹುಡುಕಿ ಅದನ್ನು ಕಾಣದೆ ತೊಳಲುವೆ. ಅದು ಇಲ್ಲದೆಡೆ ಅದನ್ನು ಅರಸುವೆ. ಅದು ಇರುವ ಕಡೆ ನೋಡದೆ ಬಿಡುವೆ."

ಆಸೆಗಳನ್ನು ಬಿಡದವನು ಅಶಾಂತನಾಗುವುದಲ್ಲದೆ ಅಸ್ವತಂತ್ರನಾಗುತ್ತಾನೆ, ದಾಸನಾಗುತ್ತಾನೆ.

"ನನಗೆ ಇದೇ ಬೇಕು ಎನ್ನುವವನು ಅದಕ್ಕೆ ದಾಸನಾಗಿದ್ದಾನೆ. ಒಬ್ಬನು ಆಸ್ತಿ ಹೋಯಿತೆನ್ನುವನು. ಇನ್ನೊಬ್ಬನು ಊರನ್ನು ಬದಲಾಯಿ

ಸಿದ್ದರಿಂದ ತಾನು ಕುಡಿಯುತ್ತಿದ್ದ ನೀರು ಸಿಕ್ಕದೆ ದುಃಖಪಡುವನು. ಇಬ್ಬರ ಅವಸ್ಥೆಯೂ ಒಂದೇ. ಎಷ್ಟು ದಿನ ಸಿಕ್ಕಿದರೆ ಅಷ್ಟು ದಿನ ಅನುಭವಿಸು. ಸುಖವು ಕೈತಪ್ಪಿದಾಗ್ಯೆ ಸಮಾಧಾನವಾಗಿಬಿಡು. ಅದಿಲ್ಲದಿದ್ದರೆ ತನ್ನ ತಾಯಿ ಅಥವಾ ದಾದಿಗಾಗಿ ಅಳುವ ಮಗುವಿನಂತೆ ನೀನೂ ಒಂದು ಮಗು."

ಸಂಸಾರದಲ್ಲಿರುತ್ತಾ ಅದು ಸುಲಭವಾಗಿಲ್ಲವೆನ್ನುವವನು ಸಂತೆ ಯಲ್ಲಿರುತ್ತಾ ಗಲಭೆ ಹೆಚ್ಚು ಎನ್ನುವವನಂತೆ. ಅದು ಆ ಸ್ಥಿತಿಯ ಸಹಜ ಲಕ್ಷಣ.

"ಆಸೆ ಇರುವವನು ತನ್ನ ಕಷ್ಟವನ್ನು ತಾನೇ ತಂದುಕೊಳ್ಳುತ್ತಾನೆ. ತಮಾಷೆ ನೋಡಬೇಕಾದರೆ ಗುಂಪಿನಲ್ಲಿ ನುಗ್ಗಬೇಕು. ಗುಂಪನ್ನು ತಡೆಯು ಲಾರೆನೆಂದರೆ ಅದನ್ನು ತಪ್ಪಿಸಿಕೊಳ್ಳುವುದು ನಿನ್ನ ಕೈಯಲ್ಲಿಯೇ ಇದೆ. ಅಲ್ಲಿಗೆ ಹೋಗಬೇಡ. ಸಂಸಾರದಲ್ಲಿಯೂ ಅಷ್ಟೆ. ಜನರು ನಿಂದಿಸುವರು, ಅದಕ್ಕೆ ಮನಸ್ಸನ್ನು ಕೊಡಬೇಡ. ನಿಂದಿಸುವವನು ನಿನಗೆ ನೋಯಲೆಂದು ನಿಂದಿಸುವನು. ನೀನು ಅದನ್ನು ಗಮನಿಸದೆ ನಿಂತಲ್ಲಿ ಅವನ ಯತ್ನವು ವಿಫಲ ವಾಯಿತು. ಅವನು ನಿಂದಿಸಿದನೆಂದು ನೀನು ಕುದಿದರೆ ನೀನೇ ಅವನಿಗೆ ಜಯವನ್ನು ಕೊಟ್ಟಂತಾಯಿತು."

ಹಾಗಾದರೆ ಆಸೆಗಳು ಇರದೆ ಉಂಟೇ ಎಂದರೆ ಮನುಷ್ಯನ ಇಚ್ಛೆ ಉತ್ತಮ ಮಾರ್ಗದಲ್ಲಿ ಪ್ರವರ್ತಿಸಬೇಕು. ಆಗ ಅದು ಸುಖವನ್ನು ತರುತ್ತದೆ, ಸ್ವಾತಂತ್ರ್ಯವನ್ನು ತರುತ್ತದೆ.

"ನಿನ್ನ ಇಚ್ಛೆಯನ್ನು ದೇವರ ಇಚ್ಛೆಗೆ ಅನುಸಾರವಾಗಿ ನೀನು ಇರಿಸಿದರೆ ನಿನ್ನ ಕಷ್ಟವೆಲ್ಲಾ ಅಂದಿಗೆ ಕೊನೆಗಾಣುವುದು. ಹೀಗೆ ಮಾಡು ವುದೇ ನಿಜವಾದ ವಿದ್ಯೆ. ಹೀಗೆ ಮಾಡಿದಾಗ ಮನುಷ್ಯನಿಗೆ ದೇವರದಾದ ಸಂಪೂರ್ಣ ಸ್ವಾತಂತ್ರ್ಯವು ಬರುವುದು.

"ಎಲ್ಲ ಸುಖಕ್ಕಿಂತಲೂ ದೇವರ ಆಜ್ಞೆಯಂತೆ ನಡೆಯುತ್ತಿದೇನೆಂಬ ಭಾವನೆಯಿಂದ ಬರುವ ಸುಖವು ಹಿರಿಯದು. ಒಳ್ಳೆಯತನವನ್ನು ಪ್ರಶಂಸೆ ಮಾಡುವುದಕ್ಕಿಂತ ಜೀವನದಲ್ಲಿ ಅನುಸಂಧಾನ ಮಾಡುವುದು ಹಿರಿಯದು. ಇತರರ ಸೌಜನ್ಯವನ್ನು ಪ್ರಶಂಸಿಸುವಾಗ ನಿನ್ನ ಗುಣವನ್ನು ಪ್ರಶಂಸಿಸು

ವಂತೆ ನೀನು ನಡೆದುಕೊಳ್ಳಬೇಕು. ಅವರ ಪಾಠಕ್ಕೆ ನೀನು ಉದಾಹರಣೆ ಯಾಗಬೇಕು. ಎಲ್ಲಾ ಸಮಯದಲ್ಲೂ ಒಳ್ಳೆಯದನ್ನಾಗಿ ಅನುಷ್ಠಾನ ಮಾಡಿ ಈ ಸ್ಥಿತಿಯನ್ನು ಸಂಪಾದಿಸು.''

"ಜೀವನದಲ್ಲಿ ತೃಪ್ತಿ ಎನ್ನುವುದು ಸಕಲ ಸುಖಕ್ಕೆ ಮೂಲ.''

ಹೀಗೆ ನಡೆಯುವವನಿಗೆ ಪ್ರಪಂಚದೊಂದಿಗೆ ವಿವಾದವಿರುವುದಿಲ್ಲ.

"ಒಳ್ಳೆಯ ಮನುಷ್ಯನು ಜಗಳಕ್ಕೆ ಹೋಗುವುದಿಲ್ಲ. ಇತರರು ಏನು ಮಾಡಿದರೂ ತಾನು ಧರ್ಮವನ್ನು ಅರಿತು ಅದರಲ್ಲಿ ನಡೆಯುವನು. ನಿನ್ನನ್ನು ಅವನು ಬೈದನು ಎಂದು ಹೇಳಿದರೆ ಹೊಡೆಯದೆ ಇದ್ದುದಕ್ಕಾಗಿ ಅವನಿಗೆ ವಂದನೆ ಎನ್ನುವನು. ಹೊಡೆದೂ ಹೊಡೆದನೆನ್ನಿ. ಗಾಯಮಾಡದೆ ಬಿಟ್ಟದ್ದಕ್ಕೆ ವಂದನೆ. ಗಾಯವನ್ನು ಮಾಡಿದನು. ಕೊಲ್ಲದೆ ಬಿಟ್ಟದ್ದಕ್ಕೆ ವಂದಿಸುತ್ತಾನೆ. ನೆರೆಯವನು ಅಪಕಾರವನ್ನು ಮಾಡಿದರೆ ಇವನು ಪ್ರತೀಕಾರವನ್ನು ಯೋಚಿಸುವುದಿಲ್ಲ. ಪ್ರತೀಕಾರ ಮಾಡುವುದು ತೋಳದ ನೀತಿ. ಮನುಷ್ಯನ ನೀತಿ ಎನ್ನುವುದು ಬೇರೆ. ಒಂದೊಂದು ಪ್ರಾಣಿಗೆ ಒಂದೊಂದು ರೀತಿಯ ಗುಣವು ಜೀವಗುಣ. ಕುದುರೆಗೆ ಓಟವು ಜೀವಗುಣ. ಮನುಷ್ಯನಿಗೆ ಬುದ್ಧಿಯು ಜೀವಗುಣ. ಮನುಷ್ಯನು ಇನ್ನು ಯಾವುದನ್ನು ಕಳೆದುಕೊಂಡಾದರೂ ಮನುಷ್ಯನಾಗಿಯೇ ಇರಬಹುದು. ಅವನು ಬುದ್ಧಿಯನ್ನು ಕಳೆದುಕೊಂಡರೆ ತನ್ನ ಮನುಷ್ಯತ್ವವನ್ನು ಕಳೆದುಕೊಂಡಂತೆ ಆಗುತ್ತದೆ. ನಾಣ್ಯದಮೇಲೆ ಇರುವ ಮುದ್ರೆಯಂತೆ ಮನುಷ್ಯನಿಗೆ ಬುದ್ಧಿಯೂ, ಅದರಿಂದ ಉದಿಸಿ ಬರುವ ಶಮದಮಾದಿ ಗುಣಗಳೂ. ಇದನ್ನರಿತ ಮನುಷ್ಯನಿಗೆ ಬಲ್ಲವರಿಂದ ಸ್ತೋತ್ರವೇ ಬರುವುದು. ಅಜ್ಞರಿಂದ ಸ್ತೋತ್ರ ಬರಲಿಲ್ಲವೆನ್ನಿ. ಕೆಟ್ಟುಹೋದುದೇನು! ಕೆಲಸಗಾರನು ಕೆಲಸವನ್ನರಿಯದವನ ಸ್ತೋತ್ರಕ್ಕೆ ಲಕ್ಷ್ಯಮಾಡಬೇಕೆ? ಹೀಗೆಯೇ ತನ್ನ ಸ್ವಭಾವಕ್ಕೆ ಸರಿಯಾಗಿ ನಡೆದುಕೊಳ್ಳುತ್ತಿರುವ ಮನುಷ್ಯನು ತನಗೆ ಬರುವ ತೊಂದರೆಗಳನ್ನು ಲಕ್ಷ್ಯಮಾಡುವುದಿಲ್ಲ. ಭದ್ರವಾದ ಕೋಟೆಯಲ್ಲಿರುವವರು ಹೇಗೆ ಅದಕ್ಕೆ ಮುತ್ತಿಗೆ ಹಾಕುವವರನ್ನು ನಿರ್ಲಕ್ಷಿಸುತ್ತಾರೆಯೋ ಹಾಗೆ ಅವನು ಅವುಗಳನ್ನು ನಿರ್ಲಕ್ಷಿಸುತ್ತಾನೆ.''

ಇಂಥವನು ತನ್ನ ನಡತೆಯನ್ನು ಪರೀಕ್ಷಿಸಿಕೊಳ್ಳುತ್ತಾನೆ. ಸದಾ ಒಂದು ಭಾವನೆಯಿಂದ ನಡೆದುಕೊಳ್ಳುತ್ತಾನೆ.

"ಒಳ್ಳೆಯವನಿಗೆ ಒಂದೇ ಭಾವನೆ ಇರುತ್ತದೆ. ನಾನು ದೇವರ ಆಜ್ಞೆಯಂತೆ ನಡೆದುಕೊಂಡೇನೇ ಎಂಬುದೇ ಆ ಭಾವನೆ. ನೀನು ಸೃಷ್ಟಿ ಮಾಡಿದ್ದು ನೀನು ಇಷ್ಟಪಟ್ಟಾಗಲಲ್ಲ; ಪ್ರಪಂಚಕ್ಕೆ ನೀನು ಬೇಕಾದಾಗ. ಈ ಕಾರಣದಿಂದ ಒಳ್ಳೆಯವನಾದವನು ತಾನು ಯಾರೆಂಬುದನ್ನೂ, ಎಲ್ಲಿಂದ ಬಂದಿದಾನೆಂಬುದನ್ನೂ, ಯಾರಿಂದ ಜನ್ಮವನ್ನು ಹೊಂದಿದನೆಂಬುದನ್ನೂ ಜ್ಞಾಪಕದಲ್ಲಿಟ್ಟುಕೊಂಡು ಇದಿಷ್ಟರಲ್ಲಿ ಮಾತ್ರ ಮನಸನ್ನಿಟ್ಟು ದೇವರ ಆಜ್ಞೆಗೆ ವಿಧೇಯನಾಗಿ, ನೀತಿಯನ್ನು ಬಿಡದೆ, ತನ್ನ ಕರ್ತವ್ಯವನ್ನು ನಡೆಯಿಸು ವಷ್ಟನ್ನು ಮಾತ್ರ ಯೋಚಿಸುವನು. ನಾನು ಇನ್ನು ಕೆಲವು ಕಾಲ ಜೀವಿಸ ಬೇಕೆನ್ನುವೆಯಾ? ನಿನ್ನ ಅಪ್ಪಣೆಯಂತೆ ವರ್ತಿಸುತ್ತ ಉದಾತ್ತ ರೀತಿಯಲ್ಲಿ ತಲೆ ಎತ್ತಿ ನಡೆಯುತ್ತ ಜೀವಿಸುತ್ತೇನೆ. ನೀನು ನನಗೆ ಇಷ್ಟನ್ನು ಕೊಟ್ಟಿದೀಯೆ. ಇನ್ನು ನನ್ನಿಂದ ಆಗಬೇಕಾದುದು ಏನೂ ಇಲ್ಲವೇ? ನಿನಗೆ ಶುಭವಾಗಲಿ. ಇದುವರೆಗೆ ನಾನು ನಿಂತದ್ದು ನಿನಗಾಗಿ; ಇನ್ನು ಯಾರಿಗಾಗಿಯೂ ಅಲ್ಲ. ಈಗ ನಿನ್ನ ಅಪ್ಪಣೆಗೆ ತಲೆಬಾಗಿ ಹೊರಡುತ್ತೇನೆ. ಹೇಗೆ ಹೊರಡುತ್ತೀಯೆ? ಮತ್ತೆ ನಿನ್ನ ಇಚ್ಛೆಯಂತೆ ತಲೆಯೆತ್ತಿಕೊಂಡು ನಿನ್ನ ಸೇವಕನಂತೆ; ನೀನು ಏನನ್ನು ಮಾಡೆನ್ನುವೆ ಏನನ್ನ ಕೂಡದೆನ್ನುವೆ ಎಂಬುದನ್ನು ತಿಳಿದವನಂತೆ. ಇಲ್ಲಿ ಇರುವವರೆಗೆ ಏನಾಗಿರು ಎಂದು ಹೇಳುವೆ? ಅಧಿಕಾರಿ ಎಂದೇ? ಸಾಮಾನ್ಯನೆಂದೇ? ಸಭಾಸದನೆಂದೇ? ಸಭಾ ಬಾಹಿರ ನೆಂದೇ? ಸೈನಿಕನೆಂದೇ? ಸೇನಾಧಿಪತಿ ಎಂದೆ? ಏನೆಂದು? ಇವುಗಳಲ್ಲಿ ಯಾವ ಕೆಲಸವನ್ನು ನೀನು ನನಗೆ ಒಪ್ಪಿಸಿದರೂ ಅದನ್ನು ಬಿಡದೆ ಮಾಡು ವೆನು. ಮಾಡದೆ ಬಿಡುವ ಮೊದಲು ಸಾಕ್ರಟೀಸನು ಹೇಳಿದಂತೆ ಹತ್ತು ಸಾವಿರ ಸಲ ಸಾವನ್ನು ಅನುಭವಿಸುವೆನು."

ಇವನಿಗೆ ಊಟಕ್ಕೆ ಹೇಗೆ, ಬಟ್ಟೆಗೆ ಹೇಗೆ ಎಂದು ಚಿಂತೆ ಬರಬಾರದು. ಮನುಷ್ಯನ ಸೌಖ್ಯ ಹೊರಗಣ ಸ್ಥಿತಿಗಿಂತಲೂ ಹೆಚ್ಚಾಗಿ ಒಳಗಣ ಸ್ಥಿತಿಯನ್ನು ಅನುಸರಿಸಿರುವುದು.

"ಒಳ್ಳೆಯವನು ಅನ್ನವಿಲ್ಲದೆ ಹೋದೀತೆಂದು ಭಯಪಡುವನೇ? ಕುರುಡರಿಗೆ ಅನ್ನವಿಲ್ಲದೆ ಹೋಗುವುದಿಲ್ಲ. ಕುಂಟರಿಗೆ ಅನ್ನವಿಲ್ಲದೆ ಹೋಗುವುದಿಲ್ಲ. ಸಜ್ಜನನಿಗೆ ಇಲ್ಲದೆ ಹೋಗುವುದೇ? ಒಳ್ಳೆಯ ಸೈನಿಕನಿಗೆ, ಒಳ್ಳೆಯ ಕೆಲಸಗಾರನಿಗೆ, ಒಳ್ಳೆಯ ಮೋಚಿಗೆ ಸಂಬಳ ಕೊಡುವವರು ಇದ್ದಾರೆ. ಸಜ್ಜನನಿಗೆ ಅವರು ಸಿಕ್ಕದೆ ಹೋಗುವರೇ? ದೇವರು ದೈವಿಕ ವಾದ ನೀತಿಯನ್ನು, ತನ್ನವರಾದ ಸೇವಕರನ್ನು, ತನ್ನ ಪರದ ಸಾಕ್ಷಿಗಳನ್ನು ಅಷ್ಟು ದುರ್ಲಕ್ಷಿಸುವನೇ? ಅಜ್ಞರಿಗೆ ಜ್ಞಾನವನ್ನು ತರುವ ಉದಾಹರಣೆ ಗಳೇ ಆಗಿ ತಾನು ಇರುವುದನ್ನೂ ಪ್ರಪಂಚವನ್ನು ನಡೆಸುತ್ತಿರುವುದನ್ನೂ ಮಾನವ ಜೀವನವನ್ನು ಅಲಕ್ಷ್ಯದಿಂದ ಕಾಣುತ್ತಿಲ್ಲವೆಂಬುದನ್ನೂ ಸುಜನರಿಗೆ ಬದುಕಲಿ ಸಾಯಲಿ ಕೆಟ್ಟುದಿಲ್ಲವೆಂಬುದನ್ನೂ ತೋರಿಸುವರಲ್ಲವೇ ಇವರು? ಅವನು ಅನ್ನವನ್ನು ಕೊಡದೆ ಇದ್ದರೆ ಏನುಮಾಡುವುದು ಎನ್ನುವೆಯಾ? ಕೊಡದೆ ಇದ್ದರೆ ಅದಕ್ಕೆ ಅರ್ಥವಿದೆ. ಇನ್ನು ನಾನು ಇಲ್ಲಿ ಇರಬೇಕಾದು ದಿಲ್ಲವೆಂದು ಅವನ ಅಭಿಪ್ರಾಯ. ಈ ಸಂದರ್ಭದಲ್ಲಿ ನಾನು ಅವನ ಆಜ್ಞೆ ಯನ್ನು ಧರಿಸುತ್ತೇನೆ; ಅದರಂತೆ ನಡೆಯುತ್ತೇನೆ. ನನ್ನ ಒಡೆಯನನ್ನು ಸ್ತುತಿಸುತ್ತೇನೆ, ಅವನ ಕೆಲಸವನ್ನು ಶ್ಲಾಘಿಸುತ್ತೇನೆ. ಅವನು ಸಕಾಲ ವೆಂದೆಣಿಸಿದಾಗ ನಾನು ಬಂದೆನು. ಅವನು ಸಕಾಲವೆಂದಾಗ ಮರಳಿ ಹೋಗುವೆನು. ಜೀವಂತನಾಗಿದ್ದಾಗ ನನಗೆ ಈ ಕೆಲಸವಿತ್ತು: ಅವನನ್ನು ಮನಸ್ಸಿನಲ್ಲಿ ಸ್ತೋತ್ರಮಾಡುವುದು, ಒಬ್ಬರಿಗೋ ಹಲವರಿಗೋ ಇತರರಿಗೆ ಸ್ತೋತ್ರಮಾಡಿ ವರ್ಣಿಸುವುದು. ಅವನು ನನಗೆ ಹೇರಳವಾದ ಐಶ್ವರ್ಯ ವನ್ನು ಕೊಡಲಿಲ್ಲವೆನ್ನೋಣ. ನಾನು ಡಂಭವಿಲ್ಲದೆ ಜೀವಿಸಬೇಕೆಂದು ಅವನ ಇಚ್ಛೆ ಎಂದು ತೋರುತ್ತದೆ. ಅವನು ತನ್ನ ಇಷ್ಟಪುತ್ರನಾದ ಹೆರಾಕ್ಲೀಸನಿಗೆ ಐಶ್ವರ್ಯವನ್ನು ಕೊಡಲಿಲ್ಲ. ಮತ್ತೆ ಯಾರೋ ರಾಷ್ಟ್ರದ ರಾಜನಾಗಿದ್ದನು; ಹೆರಾಕ್ಲೀಸನು ಅವನಿಗಾಗಿ ಅತಿಯಾಗಿ ದುಡಿದನು. ರಾಜನಾದವನು ನಿಜವಾಗಿಯೂ ರಾಷ್ಟ್ರಕ್ಕೆ ರಾಜನಾಗಿರಲಿಲ್ಲ. ಏಕೆಂದರೆ, ಅವನಿಗೆ ತನ್ನ ಮನಸ್ಸಿನಮೇಲೆಯೇ ಆಳ್ವಿಕೆ ಇರಲಿಲ್ಲ. ಹೆರಾಕ್ಲೀಸ ನಾದರೋ ಭೂಮಿ ಸಾಗರ ಸಮೇತವಾದ ಪ್ರಪಂಚಕ್ಕೇ ಗುರುವಾಗಿದ್ದನು; ಪ್ರಪಂಚದಿಂದ ಅನ್ಯಾಯವನ್ನೂ ಅಕಾರ್ಯವನ್ನೂ ತೊಡೆದನು; ಅಲ್ಲಿಗೆ

ನ್ಯಾಯವನ್ನೂ ಧರ್ಮವನ್ನೂ ತಂದನು. ಇದಿಷ್ಟನ್ನೂ ಒಂದು ಆಯುಧ ವಿಲ್ಲದೆ ಒಬ್ಬರ ಸಹಾಯವಿಲ್ಲದೆ ಮಾಡಿದನು.''

ಮನುಷ್ಯನು ತನ್ನ ಒಳಗಿನ ವಿಚಾರದಲ್ಲಿ ಶಂಕೆಯಿಂದ ನಡೆದು ಕೊಂಡದ್ದೊಂದಾದರೆ ಹೊರಗಿಂದ ಏನು ಬಂದೀತೆಂದು ಶಂಕೆಪಡಬಾರದು. ಸಾಮಾನ್ಯವಾಗಿ ನಾವು ಹೊರಗಣಿಂದ ಏನು ಬರುವುದೋ ಎಂದು ಹೆದರುತ್ತೇವೆ. ನಮ್ಮ ಅಂತರಂಗದ ವಿಚಾರವಾಗಿ ಧೈರ್ಯದಲ್ಲಿ ಇದ್ದು ಬಿಡುತ್ತೇವೆ. ಇದು ತಪ್ಪು.

ಅರಿತವನಿಗೆ ಸುಖ ಹೇಗೋ ಕಷ್ಟವೂ ಹಾಗೆಯೇ ಇಷ್ಟವಾದ ಸಂದರ್ಭವಾಗುತ್ತದೆ. ಅದು ಅವನ ಪರೀಕ್ಷೆಗಾಗಿ ಬಂದಿರುವ ಸಂದರ್ಭ. ಅವನು ಗೆಲ್ಲುವುದಕ್ಕೆ ಒಂದು ಅವಕಾಶ.

"ನಿನ್ನನ್ನು ಪರೀಕ್ಷಿಸುವ ಸಂದರ್ಭ ಬಂದಾಗ ಅಯ್ಯೋ ಇದು ಬಂತೇ ಎಂದು ಯೋಚಿಸಬೇಡ. ನೀನು ಕಲಿತ ವಿದ್ಯೆಯೆಲ್ಲಾ ಸಫಲವಾಗುವುದು ಇದರಲ್ಲಿ. ನಿನ್ನನ್ನು ಯಾವ ಅವಸ್ಥೆಯಲ್ಲಿ ದೇವರು ಇಟ್ಟರೆ ಆ ಅವಸ್ಥೆ ಯಲ್ಲಿ ನಿನ್ನ ಯೋಗ್ಯತೆಯನ್ನು ತೋರಿಸಬಹುದು. ದಾಸನಾದಾಗಲೂ ಚೆನ್ನಾಗಿ ನಡೆದುಕೊಳ್ಳಬಹುದು. ದೊರೆಯಾದಾಗಲೂ ಚೆನ್ನಾಗಿ ನಡೆದು ಕೊಳ್ಳಬಹುದು.''

ಬುದ್ಧಿವಂತನಾದವನು ಜ್ಯೋತಿಷ ಕೇಳುವುದಕ್ಕೆ ಹೋಗುವುದಿಲ್ಲ. "ಜ್ಯೋತಿಷವನ್ನು ಹೇಳುವವರ ಬಳಿ ನಾವು ಹೋಗುವ ರೀತಿ ತಪ್ಪು. 'ಸ್ವಾಮಿ, ನಮ್ಮ ತಂದೆ ಆಸ್ತಿಯನ್ನು ನನಗೆ ಕೊಡುವನೇ?' 'ಬಾ ನೋಡೋಣ.' ನೀನು ಹೋಗುತ್ತೀಯೆ. ದೇವರು ಮಾಡಿದ ಹಾಗಾಗಲಿ ಎನ್ನುತ್ತೀಯೆ. ಕೊಡುತ್ತಾನೆ ಎಂದು ಅವನು ಹೇಳಿದರೆ ನಿನ್ನ ಆನಂದಕ್ಕೆ ಮಿತಿಯಿಲ್ಲ. ಜೋಯಿಸನೇ ನಿನಗೆ ಆಸ್ತಿಯನ್ನು ಕೊಟ್ಟಂತೆ ಕುಣಿಯು ತ್ತೀಯೆ. ಇದಕ್ಕಾಗಿಯೇ ಅವರು ನಮಗೆ ಸುಳ್ಳು ಹೇಳಿ ಮೋಸಮಾಡು ವರು. ಪ್ರಯಾಣಮಾಡುತ್ತಾ ನೀನು ಎದುರಿಗೆ ಬಂದವನನ್ನು ಹೋಗ ಬೇಕಾದ ಸ್ಥಳಕ್ಕೆ ದಾರಿ ಯಾವುದು ಎಂದು ಕೇಳುವೆ. ಎದುರಿಗಿರುವ ಎರಡು ದಾರಿಯಲ್ಲಿ ಯಾವುದನ್ನು ಹೇಳಿದರೂ ನಿನಗೆ ಸಮ್ಮತವೇ? ಅವುಗಳಲ್ಲಿ ಯಾವುದು ನೀನು ಹೋಗಬೇಕಾದ ಸ್ಥಳಕ್ಕೆ ಒಯ್ಯುವುದೋ ಅದು ನಿನ್ನ

ದಾರಿ. ಮುಂದೆ ಏನು ಬರುವುದೆಂದು ದೇವರನ್ನು ಕೇಳುವಾಗಲೂ ನಾವು ಹೀಗೆಯೇ ನಡೆದುಕೊಳ್ಳಬೇಕು. ಅವನು ತೋರಿಸಿದ ದಾರಿಯಲ್ಲಿ ನಡೆದು ಕೊಳ್ಳಬೇಕು. ಕಣ್ಣುಗಳು ಎದುರಿಗೆ ಇರುವ ವಸ್ತುಗಳನ್ನು ತೋರಿಸಬೇಕೆ ಹೊರತು ಇಷ್ಟವಾದ ಬೇರೊಂದು ವಸ್ತುವನ್ನು ತೋರಿಸಬೇಕೆನ್ನುವವೇ? ಬರುವುದು ಕೆಟ್ಟದೋ ಏನೋ ಎನ್ನುವೆಯಾ? ಮಡ್ಡಿ, ದೇವರು ಯಾವುದನ್ನು ಒಳ್ಳೆಯದೆಂದು ನಿನಗೆ ಕೊಡುತ್ತಾನೋ ಅದಕ್ಕಿಂತ ಒಳ್ಳೆಯದಾವುದು?''

ಇಂಥವನಿಗೆ ಒಟ್ಟು ಜೀವಮಾನವೆಲ್ಲಾ ಒಂದು ಅಭ್ಯಾಸ ಕಾಲ ವಾಗುತ್ತದೆ. ಜೀವನವೆಲ್ಲಾ ಒಂದು ಸಾಧನ ಒಂದು ಯೋಗವಾಗುತ್ತದೆ.

"ಸಾಕ್ರಟೀಸನನ್ನು ನ್ಯಾಯಸ್ಥಾನಕ್ಕೆ ಕರೆದೊಯ್ಯುವಾಗ ಒಬ್ಬರು ಅವನಿಗೆ ಅದಕ್ಕೆ ಸಿದ್ಧನಾಗು ಎಂದರಂತೆ. ನನ್ನ ಬದುಕೆಲ್ಲಾ ಹಾಗೆ ಸಿದ್ಧ ನಾಗುವುದರಲ್ಲಿ ಇದ್ದಿದೇನೆಂದು ಅವನು ಹೇಳಿದನು. 'ಹಾಗೆಂದರೇನು?' 'ಅಂತರ್ಯದಲ್ಲಾಗಲಿ, ಬಹಿರಂಗದಲ್ಲಾಗಲಿ ಒಂದು ಅನ್ಯಾಯವನ್ನು ನಾನು ಮಾಡಿದವನಲ್ಲ' ಇದೇ ಸಿದ್ಧತೆ. ಬದುಕೆಲ್ಲವೂ ಹೀಗೆ ಸಿದ್ಧತೆ ಯನ್ನು ಪಡೆಯುವ ಸನ್ನಾಹದ ಕಾಲವೆಂದು ನಾವು ತಿಳಿಯಬೇಕು...."

ಎಪಿಕ್ಟಿಟಸನು ಹಲವು ವೇಳೆ ಹೀಗೆ ಸಾಕ್ರಟೀಸನನ್ನು ತತ್ತ್ವ ನಿಷ್ಠೆಯ ಜೀವನದ ಉದಾಹರಣೆಯೆಂದು ಹೇಳಿದಾನೆ. ವಿಶ್ವನೀತಿಗೆ ಅನುಸಾರವಾಗಿ ನಡೆದವನು ಸ್ವತಂತ್ರನು ಎಂಬುದನ್ನು ಹೀಗೆ ವಿವರಿಸಿದಾನೆ.

"ಸ್ವಾತಂತ್ರ್ಯವೆಂದರೇನು? ಸ್ವತಂತ್ರನು ಯಾರೆಂದರೆ ಯಾರನ್ನು ಮತ್ತೊಬ್ಬನು ತಡೆಯಲಾರನೋ ಯಾರು ತನ್ನ ಇಷ್ಟದಂತೆ ಎಲ್ಲಾ ವಿಷಯದಲ್ಲೂ ಪ್ರವರ್ತಿಸಬಹುದೋ ಅವನು ಸ್ವತಂತ್ರನು. ಯಾರು ಇತರರ ಅಡ್ಡಿಗೆ ಬಲಾತ್ಕಾರಕ್ಕೆ ಬಂಧನಕ್ಕೆ ಸಿಕ್ಕುವನೋ ಯಾರಿಂದ ಅವನಿಗಿಷ್ಟವಲ್ಲದ್ದನ್ನು ಇನ್ನೊಬ್ಬನು ಮಾಡಿಸಬಹುದೋ ಅವನು ದಾಸನು. ಯಾರೂ ಅಡ್ಡಿಮಾಡಬಾರದಂಥವನು ಯಾರು? ತನ್ನದಲ್ಲದ ಯಾವ ವಸ್ತು ವಿನಲ್ಲಿಯೂ ತನ್ನ ಮನಸ್ಸನ್ನಿಡದವನು. ಇಂಥವನಿಗೆ ಯಾರೂ ಅಡ್ಡಿಮಾಡರು. ತನ್ನದ್ದಲ್ಲದೆಂದರೇನು? ಬೇಕೆಂದಾಗ ಪಡೆಯುವುದಕ್ಕೂ ಬೇಡವೆಂದಾಗ ಬಿಡುವುದಕ್ಕೂ ಯಾವುದು ಸಾಧ್ಯವಲ್ಲವೋ, ಯಾವುದನ್ನು ಇಂತ ಇಂತ ರೀತಿಯಲ್ಲಿ ಇಂತ ಇಂತ ಸಂದರ್ಭದಲ್ಲಿ ಪಡೆಯುತ್ತೇನೆಂದು ನಿರ್ಧರಿಸಿ

ಕೊಂಡು ಪಡೆಯುವುದಕ್ಕೆ ಅಸಾಧ್ಯವೋ ಅದು ನಮ್ಮದಲ್ಲ. ಹೀಗೆಂದ ಮೇಲೆ ಈ ಮೈ ನಮ್ಮದಲ್ಲ. ಇದರ ಅಂಗಗಳು ನಮ್ಮವಲ್ಲ. ನಮ್ಮ ಆಸ್ತಿ ನಮ್ಮದಲ್ಲ. ನಿನ್ನದಲ್ಲದ ಈ ವಸ್ತುಗಳಲ್ಲಿಯಾವುದರಲ್ಲಾದರೂ ನಿನ್ನದೆಂಬಂತೆ ನೀನು ಮನಸ್ಸನ್ನಿಟ್ಟೆಯಾದರೆ ತನಗೆ ಸೇರದ ವಸ್ತುವನ್ನಪೇಕ್ಷಿಸುವವರಿಗೆ ತಕ್ಕದಾದ ಶಿಕ್ಷೆಗೆ ನೀನು ಗುರಿಯಾಗುವೆ. ಸ್ವಾತಂತ್ರ್ಯಕ್ಕೆ ಕರೆದೊಯ್ಯುವ ದಾರಿ ದಾಸ್ಯದಿಂದ ಬಿಡುಗಡೆಯನ್ನು ಕೊಡುವ ದಾರಿ ಒಂದೇ. ದೇವ ದೇವ, ಜಗನ್ನಿಯಾಮಕ, ನಿನ್ನ ವಿಧಿಯೇನೆಂದಿದೆಯೋ ಅದಕ್ಕೆ ನನ್ನನ್ನು ಕರೆದೊಯ್ಯು ಎಂದು ಅಂತಃಕರಣಶುದ್ಧಿಯಿಂದ ಹೇಳುವ ಬಲುಮೆ. ಇದನ್ನು ಬಿಟ್ಟರೆ ಸ್ವಾತಂತ್ರ್ಯಕ್ಕೆ ದಾರಿಯಿಲ್ಲ.

"ಹಾಗಾದರೆ ನೀನು ಸ್ವತಂತ್ರನೋ?

"ದೇವರಾಣೆ, ನನಗೆ ಸ್ವತಂತ್ರನಾಗಬೇಕೆಂದು ಅಪೇಕ್ಷೆಯಿದೆ. ಹಾಗೆಂದು ಪ್ರಾರ್ಥಿಸುತ್ತೇನೆ. ಆದರೆ ನಾನು ಇನ್ನೂ ಸ್ವತಂತ್ರನಾಗಿಲ್ಲ. ಆದರೆ ನೋಡು ಉದಾಹರಣೆಗಳನ್ನು ತೋರಬಲ್ಲೆನು. ಡಯೋಜಿನೀಸನು ಸ್ವತಂತ್ರನಾಗಿದ್ದನು. ಅವನಿಗೇನೇನು ಇತ್ತೊ ಅದನ್ನೆಲ್ಲ ಅವನು ಬಿಡಲು ಸಿದ್ಧನಾಗಿದ್ದನು. ಅದೆಲ್ಲ ಅವನಿಗೆ ಬಹು ಹಗುರವಾಗಿ ಅಂಟಿತ್ತು. ನೀನು ಅವನ ಆಸ್ತಿಯನ್ನು ತೆಗೆದುಕೊಂಡಿದ್ದರೆ ಅದನ್ನು ಕೊಡೆಂದು ನಿನ್ನ ಹಿಂದೆ ಬರುವ ಬದಲು ಅವನು ಹೋದರೆ ಹೋಗಲಿ ಎಂದು ಅದನ್ನು ಸುಮ್ಮನೆ ಬಿಡುತ್ತಿದ್ದನು. ನೀನು ಅವನ ಕಾಲನ್ನು ಕಿತ್ತುಕೊಳ್ಳುತ್ತೇನೆಂದರೆ ಹೋಗಲಿ ಎನ್ನುತ್ತಿದ್ದನು. ದೇಹವೆಂದರೂ ಅಷ್ಟೆ. ನೆಂಟರು, ಇಷ್ಟರು, ದೇಶ—ಎಲ್ಲಕ್ಕೂ ಇದೇ ರೀತಿಯ ಸಂಬಂಧ. ಇವೆಲ್ಲ ಎಲ್ಲಿಂದ ಬಂದುವು ಯಾರಿಂದ ಬಂದುವು ಎಂಬುದನ್ನು ಅವನು ಬಲ್ಲನು. ಇದರಿಂದಲೇ ಅವನು ಯಾರಿಗೂ ಹೆದರುತ್ತಿರಲಿಲ್ಲ. ಇವನಂತೆ ಇನ್ನು ಯಾರೂ ಇರಲಿಲ್ಲ, ಒಬ್ಬನ ಮಾತೇನು, ಎನ್ನಬೇಡ. ಅವನ ಜೊತೆಗೆ ಸಾಕ್ರಟೀಸನು ಇದ್ದಾನೆ. ಅವನಿಗೆ ಹೆಂಡಿರು ಮಕ್ಕಳಿದ್ದರು. ಅವನು ಅವರನ್ನು ತನ್ನವರಲ್ಲವೆಂಬಂತೆ ಭಾವಿಸುತ್ತಿದ್ದನು. ಅವನಿಗೆ ಸ್ವದೇಶವಿತ್ತು. ತನ್ನ ಧರ್ಮಕ್ಕೆ ವಿರೋಧಿಯಲ್ಲದೆ ಕರ್ತವ್ಯವೆಷ್ಟೊ ಅಷ್ಟರಮಟ್ಟಿಗೆ ಅದು ಅವನದಾಗಿತ್ತು. ಅವನಿಗೆ ಇಷ್ಟರಿದ್ದರು, ಮಿತ್ರರಿದ್ದರು. ಇದಿಷ್ಟನ್ನು ಅವನು ಧರ್ಮಕ್ಕೆ ಅಧೀನ

ವಾಗಿ ಧರ್ಮಕ್ಕೆ ವಿಧೇಯವಾಗಿ ಇಟ್ಟುಕೊಂಡಿದ್ದನು. ಈ ಕಾರಣದಿಂದ ಯುದ್ಧಕ್ಕೆ ಹೋಗಬೇಕಾಗಿಬಂದಾಗ ಅವನು ಎಲ್ಲರಿಗಿಂತ ಮೊದಲು ನಗರವನ್ನು ಬಿಟ್ಟು ಯುದ್ಧಭೂಮಿಗೆ ನಡೆದನು. ಯುದ್ಧದಲ್ಲಿ ಎಲ್ಲ ಕಷ್ಟನಿಷ್ಠುರವನ್ನು ಸ್ವಲ್ಪವಾದರೂ ಬೇಸರಪಡದೆ ಅನುಭವಿಸಿದನು. ಆದರೂ ಶತ್ರುಗಳು ಲೆಯಾನನ್ನು ಕರೆದುಕೊಂಡುಬಾ ಎಂದಾಗ ಆಕಡೆ ಮನಸ್ಸನ್ನೇ ಕೊಡಲಿಲ್ಲ. ಅದು ನಾಚಿಕೆಗೇಡೆಂದು ಅವನು ಭಾವಿಸಿದನು. ಅವರು ಹೇಳಿದಂತೆ ಮಾಡದಿದ್ದರೆ ಅವರು ತನ್ನನ್ನು ಕೊಂದರೂ ಕೊಲ್ಲಬಹುದೆಂದು ತಿಳಿದರೂ ಅವನು ಲಕ್ಷ್ಯಮಾಡಲಿಲ್ಲ. ಯಾಕೆ? ತನ್ನ ದೇಹವನ್ನಷ್ಟನ್ನು ಮಾತ್ರ ಅಲ್ಲದೆ ಬೇರೆ ಯಾವುದನ್ನೋ ಉಳಿಸಿಕೊಳ್ಳುವುದಕ್ಕೆ ಅವನು ಅಪೇಕ್ಷಿಸಿದನು—ಆರ್ಜವ, ತನ್ನ ಆತ್ಮಗೌರವ. ಇವುಗಳನ್ನು ಇನ್ನೊಬ್ಬರ ಇಷ್ಟಕ್ಕೆ ಬಿಡಲಾಗದು ; ಇನ್ನೊಬ್ಬರ ಅಧೀನದಲ್ಲಿ ಇಡಲಾಗದು. ಆಮೇಲೆ ತನ್ನ ಪ್ರಾಣಕ್ಕಾಗಿ ತಾನು ನ್ಯಾಯಸ್ಥಾನದಲ್ಲಿ ವಾದಿಸಬೇಕಾದಾಗ ಅವನು ಮಕ್ಕಳಿರುವವನಂತೆ ಹೆಂಡತಿಯಿರುವವನಂತೆ ನಡೆದುಕೊಂಡನೆ? ಇಲ್ಲ. ಪ್ರಪಂಚದಲ್ಲಿ ಒಬ್ಬೊಂಟಿಗನಾದವನು ಹೇಗೋ ಹಾಗೆ ನಡೆದುಕೊಂಡನು. ಆಮೇಲೆ ವಿಷವನ್ನು ಕುಡಿಯಬೇಕಾಗಿಬಂದಿತಲ್ಲಾ, ಆಗ ಹೇಗೆ ನಡೆದುಕೊಂಡನು? ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿದ್ದಾಗ, ಮಿತ್ರನಾದ ಕ್ರೀಟೊ ಅವನನ್ನು ಕುರಿತು ನಿನ್ನ ಮಕ್ಕಳಿಗಾಗಿ ನಿನ್ನ ಜೀವವನ್ನು ಉಳಿಸಿಕೋ ಎಂದು ಹೇಳಿದಾಗ, ಅವನೇನೆಂದನು? ತಪ್ಪಿಸಿಕೊಳ್ಳುವ ಅವಕಾಶವು ದೈವ ಕೃಪೆಯಿಂದ ಬಂತೆಂದು ಎಣಿಸಿದನೆ? ಇಲ್ಲ. ಯಾವುದು ಲಕ್ಷಣವಾದ ನಡತೆ ಎಂದು ಅವನು ನೋಡಿದನು. ಇನ್ನಾವುದರಕಡೆಗೂ ಅವನ ದೃಷ್ಟಿ ಹೋಗಲಿಲ್ಲ ಅವನ ಮನಸ್ಸು ಹರಿಯಲಿಲ್ಲ. ಏಕೆಂದರೆ, ಅವನು ತನ್ನ ಅಲ್ಪವಾದ ಶರೀರವನ್ನು ಉಳಿಸಿಕೊಳ್ಳುವ ಆಸೆಯುಳ್ಳವನಾಗಿರಲಿಲ್ಲ. ಯಾವುದು ಒಳ್ಳೆಯ ನಡತೆಯಿಂದ ಅಭಿವೃದ್ಧಿಯಾಗುವುದೋ ಉಜ್ಜೀವಿಸುವುದೋ ಯಾವುದು ಕೆಟ್ಟ ನಡತೆಯಿಂದ ಕ್ಷೀಣವಾಗುವುದೋ ಬಾಡುವುದೋ ಅದನ್ನು ಉಳಿಸಿಕೊಳ್ಳುವುದಕ್ಕೆ ನೋಡಿದನು. ಋಜುಮಾರ್ಗವನ್ನು ಬಿಟ್ಟು ಜೀವವನ್ನು ಉಳಿಸಿಕೊಳ್ಳುವುದಕ್ಕೆ ಅವನು ಒಪ್ಪಲಿಲ್ಲ, ಇದೀಗ ಸ್ವಾತಂತ್ರ್ಯವೆನ್ನುವುದು."

ಸೌಖ್ಯವೆನ್ನುವುದು ಒಳ್ಳೆಯುದನ್ನು ಮಾಡುವಷ್ಟರಿಂದಲೇ ಬರುತ್ತದೆ. ಅದರಿಂದ ಬರುವ ಬೇರೆ ಒಂದು ಫಲದಿಂದ ಬರುವುದಿಲ್ಲ.

"ತನಗೆ ಸಹಜವಾದ ಒಳ್ಳೆಯುದನ್ನು ಮಾಡುವುದು ಮನುಷ್ಯನ ಕೆಲಸ. ಅದರಿಂದ ಏನಾಗುತ್ತದೆಂದು ಅವನು ಯೋಚಿಸತಕ್ಕದ್ದಲ್ಲ."

ಒಳ್ಳೆಯುವರಿಗೆ ಕೆಟ್ಟವರು ಹಿಂಸೆ ಮಾಡುವರಲ್ಲಾ ಎಂದರೆ ಅವರು ಎಚ್ಚರಿಕೆಯಿಂದಿರಲಿ. ಅವರ ಕರ್ಮದಿಂದ ಒಳ್ಳೆಯುವರಿಗೆ ಆಗುವ ಕೇಡಿಗಿಂತಲೂ ಅವರಿಗೇ ಹೆಚ್ಚು ಕೇಡಾಗಿದೆ. ಅವರು ಮಾನವರಾಗಿ ಹುಟ್ಟಿ ಮಾನವತ್ವವನ್ನು ಕಳೆದುಕೊಳ್ಳುತ್ತಿದಾರೆ.

"ಒಳ್ಳೆಯುವರು ದುಷ್ಟರಿಂದ ಹಿಂಸಿಸಲ್ಪಡುವುದು ಸರಿಯೇ? ಅದಕ್ಕೆ ಅವರು ಒಪ್ಪಿಕೊಳ್ಳಬಹುದೇ? ಸಾಕ್ರಟೀಸನಿಗೆ ಅಥೆನ್ಸಿನ ಜನರು ಕೊಟ್ಟ ಹಿಂಸೆ ಸರಿಯೆಂದೇ ನಿನ್ನ ಮತವೇ? ಅಯ್ಯಾ, ಸಾಕ್ರಟೀಸನು ಹಿಂಸೆಪಟ್ಟನೇ? ಅವನ ದೇಹಕ್ಕೆ ಹಿಂಸೆಯಾಯಿತು. ಸಾಕ್ರಟೀಸನು ಹಿಂಸೆಪಡಲಿಲ್ಲ. ಅವನೇ ಏನೆಂದು ಹೇಳುತ್ತಾನೆ? 'ಇವರು ನನ್ನ ಪ್ರಾಣವನ್ನು ತೆಗೆಯಬಹುದು. ಆದರೆ ನನಗೆ ಕೆಟ್ಟದನ್ನು ಮಾಡಲಾರರು.' ಮತ್ತೊಂದು ಸಲ, ದೇವರ ಇಚ್ಛೆ ಹೇಗಿದ್ದರೆ ಹಾಗೆ ಆಗಲಿ, ಎಂದನು. ಅವನನ್ನು ಹಿಂಸಿಸಿದವರು ಅವನಿಗಿಂತ ಹೆಚ್ಚು ಶಕ್ತಿಯುಳ್ಳವರಾಗಿದ್ದರು. ಆದರೆ ಅವನಿಗಿಂತ ಉತ್ತಮರಾದರೇ? ಕಳ್ಳನು ನನ್ನ ದೀಪವನ್ನು ಕದ್ದನು. ಎಚ್ಚರವಾಗಿರುವುದರಲ್ಲಿ ನನಗಿಂತ ಅವನು ಶಕ್ತನು. ಅದರಿಂದ ನನಗೆ ದೀಪ ಹೋಯಿತು. ಅವನಿಗೆ ದೀಪ ಸಿಕ್ಕಿತು. ಆದರೆ ಅವನು ಆ ದೀಪವನ್ನು ಸುಮ್ಮನೆ ಪಡೆಯಲಿಲ್ಲ. ಅದಕ್ಕೆ ಒಂದು ಬೆಲೆಯನ್ನು ಕೊಟ್ಟಿದ್ದಾನೆ. ಒಂದು ದೀಪಕ್ಕಾಗಿ ಅವನು ಕಳ್ಳನಾದ. ಸತ್ಯವನ್ನು ಬಿಟ್ಟ; ಪಶುವಾದ. ಇಷ್ಟು ಯೋಗ್ಯತೆಯನ್ನು ಕಳೆದುಕೊಂಡು ಒಂದು ದೀಪವನ್ನು ಸಂಪಾದಿಸುವುದು ಲಾಭಕರವಾದ ವ್ಯಾಪಾರವೆಂದು ಅವನಿಗೆ ತೋರಿತು."

ಇತರರು ಮಾಡುವ ತೊಂದರೆಯಿಂದ ಜ್ಞಾನಿಗೆ ತೊಂದರೆಯಾಗಲಾರದು.

"ಶಕ್ತರಾದ ಅಧಿಕಾರಿಗಳು ನಾನು ತಪ್ಪು ಮಾಡದಿದ್ದರೂ ನನ್ನನ್ನು ಸೆರೆಯಲ್ಲಿ ಹಾಕುವರೆ? ಹಾಕಲಿ. ನಾನು ಸೆರೆಯಲ್ಲಿರುವುದು ಅವರಿಗೆ

ಇಷ್ಟವಾದಷ್ಟು ದಿನ ಅಲ್ಲೇ ಇರುವೆನು. ಇಷ್ಟವಲ್ಲವೆಂದರೆ ಹೊರಗೆ ಬರುವೆನು. ಮತ್ತೆ ಇಷ್ಟವೆಂದರೆ ಒಳಗೆ ಹೋಗುವೆನು. ಎಷ್ಟು ಕಾಲ ನಾನು ಈ ದೇಹದಲ್ಲಿರುವುದು ಅವಶ್ಯಕವೆಂದು ಬುದ್ಧಿ ಎಷ್ಟು ಕಾಲ ಹೇಳುವುದೋ ಅಷ್ಟು ಕಾಲ. ಬುದ್ಧಿ ಹೇಳುವುದು ನಿಂತಾಗ 'ಇಗೋ ಈ ದೇಹವನ್ನು ತೆಗೆದುಕೋ. ನಿನಗೆ ಶುಭವಾಗಲಿ.' ಆದರೆ ಬುದ್ಧಿಯ ಒಪ್ಪಿಗೆಯಿಲ್ಲದೆ ಅಥವಾ ಮನೋದಾರ್ಢ್ಯ ಸಾಲದೆ ಅಥವಾ ಯಾವ ಒಂದು ಒಣನೆಪದಿಂದ ದೇಹವನ್ನು ಕೊಡಲಾಗದು. ಏಕೆಂದರೆ, ಅದು ಭಗವಂತನಿಗೆ ಇಷ್ಟವಲ್ಲ. ಅವನಿಗೆ ಈ ಪ್ರಪಂಚವು ಬೇಕಾಗಿದೆ; ಆ ಪ್ರಪಂಚದಲ್ಲಿ ನಮ್ಮಂಥ ಪ್ರಾಣಿಗಳು ನಡೆದಾಡುವುದು ಇಷ್ಟವಾಗಿದೆ. ಅವನೇನಾದರೂ ನೀನು ಹೋಗು ಎಂದು ಅಪ್ಪಣೆಯನ್ನು ಕೊಟ್ಟನಾದರೆ ಸಾಕ್ರಟೀಸನು ಹೇಗೆ ಅದಕ್ಕೆ ಒಪ್ಪಿಕೊಂಡನೋ ಹಾಗೆಯೇ ನಾವೂ ಆ ಸೇನಾಧಿಪತಿಯ ಅಪ್ಪಣೆಯನ್ನು ಶಿರಸಾವಹಿಸುವೆವು.''

ಜ್ಞಾನಿಯಾದವನಿಗೆ ಜೀವನದ ವಿಷಯದಲ್ಲಿ ಅಸಹನೆ ಇರುವುದಿಲ್ಲ.

''ಜೀವನವನ್ನು ಒಂದು ಉತ್ಸವ ದಿನದ ನೋಟದಂತೆ ನೋಡಬೇಕು. ಜೀವನದಲ್ಲಿ ಕಷ್ಟವಿದೆಯೆಂದರೆ ಉತ್ಸವವನ್ನು ನೋಡುವುದಕ್ಕೆ ಹೋದಾಗ ಇಲ್ಲದೆ ಹೋಗುತ್ತದೆಯೇ? ಬಿಸಿಲು, ಮಳೆ, ನುಗ್ಗು, ನೂಕಲು, ಕೂಗು ಇವು ಉತ್ಸವದಲ್ಲಿ ತಪ್ಪಿದ್ದಲ್ಲ; ಸ್ವಲ್ಪ ಕಷ್ಟ ನಿಷ್ಠುರವು ಬದುಕಿನಲ್ಲಿ ತಪ್ಪಿದ್ದಲ್ಲ. ಕಷ್ಟವನ್ನು ಸಹಿಸುವುದು ಮನುಷ್ಯನ ಸರ್ವ ವಿಧವಾದ ಶಕ್ತಿಗಳ ಬೆಳವಣಿಗೆಗೆ ಅವಕಾಶ.''

ಸೃಷ್ಟಿಯನ್ನೆಲ್ಲ ನೋಡಿದರೆ ದೇವರೊಬ್ಬನಿರಬೇಕೆಂದು ಕಾಣುತ್ತದೆ. ಅವನು ಎಂಥ ಶಕ್ತನೆಂದು ಆಶ್ಚರ್ಯವಾಗುತ್ತದೆ.

''ಸೃಷ್ಟಿಯಲ್ಲಿ ರೂಪುಗೊಂಡಿರುವ ಒಂದೊಂದು ವಿಷಯವೂ ದೇವರ ಕುಟುಂಬಭರಣ ಶಕ್ತಿಯನ್ನು ಸ್ತುತಿಸುವುದಕ್ಕೆ ಕಾರಣವಾಗಬಹುದು. ಇದಕ್ಕೆ ನಮಗೆ ಎರಡು ಗುಣ ಮಾತ್ರ ಬೇಕು. ಇವು ಯಾವುವೆಂದರೆ ಒಂದೊಂದು ವಸ್ತುವಿನ ಎಲ್ಲಾ ಸಂದರ್ಭವನ್ನು ನೋಡುವ ದೃಷ್ಟಿ ಮತ್ತು ಕೃತಜ್ಞತೆ. ಇವು ಇಲ್ಲದಿದ್ದರೆ ಅದು ಆಗುವುದಿಲ್ಲ. ದೃಷ್ಟಿಯಿಲ್ಲದವನು ಪ್ರಕೃತಿಯ ವಸ್ತುಗಳ ಸಂಪೂರ್ಣವಾದ ಗುಣವನ್ನು ಅರಿಯಲಾರನು.

ಕೃತಜ್ಞತೆಯಿಲ್ಲದಿದ್ದರೆ ದೃಷ್ಟಿಯಿದ್ದು ಅವುಗಳನ್ನು ಅರಿತರೂ ಅವನು ದೇವರಿಗೆ ವಂದನೆಯನ್ನು ಸಮರ್ಪಿಸನು. ದೇವರು ವರ್ಣಗಳನ್ನೂ ದೃಷ್ಟಿಗೋಚರವಾದ ಇನ್ನೂ ಇತರ ವಸ್ತುಗಳನ್ನೂ ಸೃಜಿಸಿ ಅವುಗಳನ್ನು ವಿಷಯೀಕರಿಸುವ ನೋಟವೆಂಬ ಶಕ್ತಿಯನ್ನು ಕೊಡದೇ ಇದ್ದಿದ್ದರೆ ಆ ವಸ್ತುಗಳಿಂದ ಪ್ರಯೋಜನವೇನಾಗುತ್ತಿತ್ತು? ಏನೂ ಇಲ್ಲ. ವಸ್ತುಗಳನ್ನು ಮಾಡಿ ನೋಟದ ಶಕ್ತಿಯನ್ನು ಕೊಟ್ಟು, ಬೆಳಕನ್ನು ಮಾಡದೇ ಇದ್ದಿದ್ದರೆ ಆ ವಸ್ತುಗಳಿಂದಲೂ ಈ ನೋಟದಿಂದಲೂ ಏನು ಪ್ರಯೋಜನವಾಗುತ್ತಿತ್ತು? ಏನೂ ಇಲ್ಲ. ಇವುಗಳಲ್ಲಿ ಒಂದನ್ನು ಒಂದಕ್ಕೆ ಹೊಂದಿಸಿ ಎಲ್ಲವನ್ನೂ ಉಪಯುಕ್ತವಾಗಿ ಮಾಡಿದವನು ಯಾರು? ಒರೆಗೆ ಕತ್ತಿಯನ್ನೂ ಕತ್ತಿಗೆ ಒರೆಯನ್ನೂ ಸರಿಯಾಗಿ ಹವಣಿಸಿದವನು ಯಾರು? ಯಾರೂ ಇಲ್ಲವೆನ್ನುವೆಯಾ? ಒಂದಕ್ಕೊಂದು ಹೊಂದಿರುವ ಇಂಥ ವಸ್ತುಗಳನ್ನು ನೋಡಿದಾಗಲೇ ಇದರ ಕರ್ತರು ಯಾರೋ ಇರಬೇಕೆಂದೂ ಇವು ಆಕಸ್ಮಿಕವಾಗಿ ಆದುವಲ್ಲವೆಂದೂ ನಮಗೆ ತೋರುವುದಿಲ್ಲವೇ? ಹೀಗೆ ಒಂದಕ್ಕೊಂದು ಹೊಂದಿರುವ ವಿಷಯಗಳು ಸೃಷ್ಟಿಯಲ್ಲಿ ತುಂಬಿವೆ. ಕರ್ತನನ್ನು ಇಲ್ಲವೆನ್ನುವವರು ಇವುಗಳ ಈ ಹೊಂದಿದ ಹವಣಿಕೆ ಹೇಗಾಯಿತೆಂದು ಹೇಳಲಿ."

ಈ ದೇವರು ಎಂಬ ತತ್ತ್ವ ಎಲ್ಲ ಕಡೆಯೂ ಇದೆ. ಇದೇ ಎಲ್ಲವನ್ನೂ ನಡೆಯಿಸುತ್ತದೆ, ಎಲ್ಲಕ್ಕೂ ಸಾಕ್ಷಿಯಾಗಿದೆ.

"ಗಿಡ, ಮರ, ಬಳ್ಳಿಯನ್ನು ದೇವರು ಹೂ ಬಿಡು ಎಂದಾಗ ಅದು ಹೂವನ್ನು ಬಿಡುವುದು. ಬೆಳೆ ಎಂದಾಗ ಬೆಳೆಯುವುದು. ಹಣ್ಣನ್ನು ಧರಿಸು ಎಂದಾಗ ಧರಿಸುವುದು. ಆ ಹಣ್ಣನ್ನು ಕೆಳಕ್ಕೆ ಹಾಕು ಎಂದಾಗ ಕೆಳಕ್ಕೆ ಹಾಕುವುದು. ಎಲೆ ಉದುರಲಿ ಎಂದಾಗ ಎಲೆ ಉದುರುವುದು. ಇನ್ನು ಸ್ವಲ್ಪ ವಿಶ್ರಮಿಸಿಕೊಳ್ಳಿ ಎಂದಾಗ ಅವು ವಿಶ್ರಮಿಸಿಕೊಳ್ಳುವುವು. ಹೀಗೆ ಭಗವಂತನ ಆಜ್ಞೆಯು ಹೆಜ್ಜೆ ಹೆಜ್ಜೆಗೂ ನಿರಾತಂಕವಾಗಿ ನಡೆಯುತ್ತಿರುವುದು ಹೇಗೆ? ಚಂದ್ರನು ಬೆಳೆದಹಾಗೆ ಅಳಿದಹಾಗೆ, ಸೂರ್ಯನು ಸಮೀಪಿಸಿದ ಹಾಗೆ ದೂರಗತನಾದ ಹಾಗೆ ಭೂಮಿಯಮೇಲೆ ಪರಿಪರಿಯ ಮಾರ್ಪಾಡುಗಳು ನಮಗೆ ಕಾಣುವುವೇಕೆ? ನಮ್ಮ ದೇಹವೂ ಮರಗಳಂತೆ

ಗಿಡಬಳ್ಳಿಗಳಂತೆ ಸೃಷ್ಟಿಯ ಯಂತ್ರದಲ್ಲಿ ಸೇರಿರುವುದಲ್ಲವೇ? ದೇಹಗಳಂತೆ ನಮ್ಮ ಮನಸ್ಸುಗಳೂ ಸೇರಿರಬೇಕು; ಭಗವಂತನ ಅನಂತ ಜೀವನದಲ್ಲಿ ಭಾಗವಾಗಿ ಹೊಂದಿಕೊಂಡಿರಬೇಕು. ಇಂಥ ಗಾಢ ಸಂಬಂಧವಿರುವಾಗ ನಮ್ಮ ಕರ್ಮವೆಲ್ಲವನ್ನೂ ಆತನು ಕಾಣುತ್ತಿರುವನೆನ್ನುವುದು ನ್ಯಾಯವಲ್ಲವೇ? ಬಾಗಿಲನ್ನು ಹಾಕಿ ಒಳಗೆ ಕುಳಿತಾಗ ನಾನೊಬ್ಬನೇ ಇರುವೆನೆಂದು ಹೇಳಬೇಡ. ಏಕೆಂದರೆ ದೇವರೂ ಒಳಗಿದ್ದಾನೆ. ನಿನ್ನನ್ನು ರಕ್ಷಿಸುವುದಕ್ಕೆ ದೇವರಿಗೂ ಅವನ ಅಂಶಕ್ಕೂ ಬೆಳಕು ಬೇಕಿಲ್ಲ. ನಿನ್ನ ಅಂತರಾತ್ಮನಿಗೆ ನೀನೊಂದು ಆಣೆಯನ್ನು ಕೊಡು. ಸರ್ವದಾ ಒಳ್ಳೆಯದನ್ನೇ ಮಾಡುವೆನೆಂದು ಶಪಥಮಾಡು.''

ವಿಶ್ವವ್ಯಾಪಿಯಾದ ಈ ಶಕ್ತಿಯ ಕರುಣೆಯ ಪಾವನತೆಯ ಭಾವನೆಯಿಂದ ನಮ್ಮ ಬಾಳು ಶುದ್ಧವಾಗುತ್ತದೆ; ಉದ್ಧಾರವಾಗುತ್ತದೆ.

''ದೇವರು ದಯಾಮಯನು. ನಾವು ಒಳ್ಳೆಯದೆನ್ನುವುದೂ ದಯಾಮಯವು. ಆದಕಾರಣ ನಾವು ದೈವಿಕ ಎಂದೆಣಿಸುವ ಗುಣವೂ ಒಳ್ಳೆಯದೆಂದೆಣಿಸುವ ಗುಣವೂ ಒಂದೆ. ನಮ್ಮಲ್ಲಿ ದೈವಿಕವೆನ್ನುವುದು ಯಾವುದು? ದೇಹವಲ್ಲ ಭೂಮಿಯಲ್ಲ ಧನವಲ್ಲ. ನಮ್ಮ ಆತ್ಮವು ದೈವಿಕಾಂಶ, ಬುದ್ಧಿಯು ದೈವಿಕಾಂಶ. ನಮ್ಮ ಒಳ್ಳೆಯದೆನ್ನುವುದು ಈ ಆತ್ಮ ಬುದ್ಧಿಗಳಿಗೆ ಸಂಬಂಧಪಟ್ಟದ್ದಾಗಿ ಇರಬೇಕು. ನೀನು ದೇವರ ಸೃಷ್ಟಿಯಲ್ಲಿ ಅತ್ಯುತ್ತಮ ಸೃಷ್ಟಿಯೆಂದು ತಿಳಿ. ನೀನು ಅವನ ಒಂದು ಕಣವನ್ನು ಒಳಗೆ ಇರಿಸಿಕೊಂಡಿದ್ದೀಯೆ; ಅವನ ಒಂದು ಕಣವಾಗಿದ್ದೀಯೆ. ನಿನ್ನ ಈ ಉತ್ತಮ ಕುಲವನ್ನು ಏಕೆ ಮರೆಯುವೆ, ನೀನು ಎಷ್ಟು ಉತ್ತಮವಾದ ಸ್ಥಾನದಿಂದ ಬಂದಿರುವೆ ಎಂಬುದನ್ನು ತಿಳಿಯದೆ ಹೋಗುವೆ? ಊಟಮಾಡುವಂದು ಊಟಮಾಡುತ್ತಿರುವ ನೀನು ಯಾರೆಂದು ನೆನೆಯದೆ ಬಿಡುವೆಯಾ? ಯಾರಿಗೆ ಆಹಾರವನ್ನು ಕೊಡುತ್ತಿರುವೆ ಎಂದು ನೆನೆಯದೆ ಇರುವೆಯಾ? ಸ್ತ್ರೀಯರೊಂದಿಗೆ ನಡೆದುಕೊಳ್ಳುವುದರಲ್ಲಿ ಇದೇ ರೀತಿ ಯೋಚಿಸದೆ ಬಿಡುವೆಯಾ? ನಿನ್ನ ನಡೆ ನುಡಿ ಮಾತು ಕಥೆ ಎಲ್ಲದರಲ್ಲಿಯೂ ನೀನು ದೇವರನ್ನು ಬೆಳೆಸುತ್ತಿರುವುದನ್ನೂ ವಿಕಾಸಪಡಿಸುತ್ತಿರುವುದನ್ನೂ ಕಾಣೆಯಾ? ಮರುಳೇ! ನೀನು ದೇವರನ್ನು ಹೊತ್ತುಕೊಂಡು ತಿರುಗಾಡುತ್ತಿರುವೆ.

ಆದರೆ ಅದನ್ನರಿಯೆ. ಏನು? ಒಂದು ವಿಗ್ರಹವನ್ನು ಹೊತ್ತುಕೊಂಡು ತಿರುಗುವೆಯೆಂದು ನಾನು ಹೇಳಿದೆನೆ? ಅವನು ನಿನ್ನೊಳಗಿದ್ದಾನೆ. ನಿನ್ನ ದುಃಷ್ಟ ಭಾವನೆಯಿಂದಲೂ ದುಷ್ಟ ಕರ್ಮಗಳಿಂದಲೂ ನೀನು ಅವನನ್ನು ಮಲಿನನನ್ನಾಗಿ ಮಾಡುತ್ತಿರುವುದನ್ನು ನೀನು ಕಾಣದಿರುವೆ. ಎದುರಿಗೆ ಒಂದು ದೇವತಾ ವಿಗ್ರಹವಿದ್ದರೆ ನೀನು ಇವುಗಳು ಯಾವುವನ್ನು ಮಾಡಲೂ ಹೆದರುವೆ? ದೇವತೆಯೇ ನಿನ್ನೊಳಗೆ ಸಿಂದಿರಲಾಗಿ ಹಾಗೆ ಮಾಡುವುದಕ್ಕೆ ನೀನು ನಾಚುವುದಿಲ್ಲ. ಮೂರ್ಖ, ನೀನು ನಿನ್ನ ಯೋಗ್ಯತೆಯನ್ನರಿಯೆ. ನೀನು ದೈವದಿಂದ ಬಾಹಿರನಾಗಿರುವೆ."

ಈ ಭಾವವೊಂದನ್ನು ಬೆಳೆಸಿಕೊಂಡರೆ ಯಾವ ವಿಷಯದಲ್ಲಿಯೂ ನಾವು ಭಯಪಡಬೇಕಾದುದಿಲ್ಲ.

"ಯುವಕನೊಬ್ಬನನ್ನು ಶಾಲೆಯಿಂದ ಕಾರ್ಯವೊಂದಕ್ಕೆ ಕಳುಹಿಸು ವಾಗ, ಅವನು ಊಟದಲ್ಲಿ ಸ್ತ್ರೀಯರೊಡನೆ ಇತರ ಸಂದರ್ಭದಲ್ಲಿ ಏನು ಮಾಡುವನೋ ಎಂದು ನಾವು ಯೋಚಿಸುವುದೇಕೆ? ಏಕೆಂದರೆ, ಅವನಿಗೆ ತನ್ನಲ್ಲಿರುವ ದೈವವು ಗೊತ್ತಿಲ್ಲ. ತಾನು ಯಾರೊಂದಿಗೆ ಹೋಗುತ್ತಿದ್ದಾ ನೆಂಬುದನ್ನು ಆತನು ತಿಳಿದಿಲ್ಲ. ನೀನು ನನ್ನ ಜೊತೆಗಿರು ಎಂದು ಅವನು ಹೇಳಬಹುದಲ್ಲವೆ? ನಾವು ಅದಕ್ಕೆ ಒಪ್ಪಬಹುದೆ? ನಾನೇಕೆ ಜೊತೆಗೆ ಬರಲಿ? ನಿನ್ನೊಡನೆ ದೇವರಿಲ್ಲವೆ? ಅವನಿರುವಾಗ ಇನ್ನೊಬ್ಬರ ಜೊತೆಯನ್ನು ಬೇಡುವೆಯಾ? ದೇವರು ನಿನಗೆ ಏನು ಹೇಳುವನು? ನೀನು ಕುಶಲಿಯಾದ ಶಿಲ್ಪಿಯೊಬ್ಬನು ಕೆತ್ತಿದ ವಿಗ್ರಹವಾಗಿದ್ದಿದ್ದರೆ ನಿನ್ನನ್ನು ಇಂಥ ಶಿಲ್ಪಿಯು ಕೆತ್ತಿದನೆಂಬ ಕಾರಣದಿಂದ ಅವನಿಗೆ ಅಪಚಾರವಾಗಬಹುದಾದ ಯಾವ ಒಂದು ದೋಷಕ್ಕೂ ನೀನು ಎಡೆಗೊಡುತ್ತಿರಲಿಲ್ಲ. ದೇವರೇ ಮಾಡಿರುವ ಸಂದರ್ಭ ದಲ್ಲಿ ನೀನು ಅವನಿಗೆ ಅಪಚಾರವಾಗುವ ಏನನ್ನಾದರೂ ನಡೆಯಿಸಿಯೇನು ಎಂದು ಭಾವಿಸದೆ ಬಿಡುವೆಯಾ? ನಿನ್ನನ್ನು ಮಾಡಿದ ಈ ಕುಶಲ ಶಕ್ತಿಯ ಕರ್ಮಕ್ಕೆ ಅವಮರ್ಯಾದೆಯನ್ನೂ ಅಪಮಾನವನ್ನೂ ತೋರುವೆಯಾ? ನನ್ನ ಕುಶಲ ಕರ್ಮವು ನೀನು, ನಿನ್ನನ್ನು ನೀನು ನೋಡಿಕೊ ಎಂದು ಅವನು ತನ್ನ ಕುಶಲ ಕರ್ಮವನ್ನು ನಿನ್ನ ರಕ್ಷಣೆಯಲ್ಲಿ ಬಿಟ್ಟನು. ನಿನಗೆ ಅವನು ಒಪ್ಪಿಸಿದ ಕಾರ್ಯದಲ್ಲಿ ನೀನು ಭ್ರಷ್ಟನಾಗುವೆಯಾ?"

ಇದನ್ನರಿತವರಿಗೆ ಎಲ್ಲ ಸಮಯದಲ್ಲಿಯೂ ಹಿರಿಯ ನಡತೆಯೇ ಸಾಧ್ಯ.

"ಮುಂದೆ ಏನಾದರೂ ಒಂದು ಸಂದರ್ಭದಲ್ಲಿ ಹೇಗೆ ನಡೆದುಕೊಳ್ಳಬೇಕು? ದೇವರು ಮೆಚ್ಚುವಂತೆ ನಡೆದುಕೊಳ್ಳಬೇಕು. ನಿನ್ನನ್ನು ಪ್ರಪಂಚದ ಅಧಿನಾಯಕರಲ್ಲಿ ಕರೆದುಕೊಂಡು ಹೋಗಿದ್ದಾರೆ ಎನ್ನು. ನೀನು ಅವರ ಮುಂದೆ ನಿಂತಿರುವಾಗ ಮತ್ತೊಬ್ಬನು ನಿನ್ನನ್ನು ನೋಡುತ್ತಿದ್ದಾನೆಂಬುದನ್ನು ಮರೆಯದಿರು. ಇಲ್ಲಿ ನಡೆಯುವುದನ್ನು ಅವನು ನೋಡುತ್ತಿದ್ದಾನೆ. ನೀನು ಮೆಚ್ಚಿಸಬೇಕಾದದ್ದು ನಿನ್ನ ಮುಂದಿರುವ ಅಧಿನಾಯಕರನ್ನಲ್ಲ; ಅವನನ್ನು."

ಇದನ್ನು ತಿಳಿದುಕೊಂಡ ಮನುಷ್ಯನಿಗೆ ಆತ್ಮಗೌರವ ಹುಟ್ಟುತ್ತದೆ.

"ಅಯ್ಯಾ, ಚಕ್ರವರ್ತಿಯು ನಿನ್ನನ್ನು ಮಗನಾಗಿ ಮಾಡಿಕೊಂಡರೆ ನಿನ್ನ ಅಹಂಕಾರವನ್ನು ತಡೆಯಲಾಗದೆ ಹೋಗುವುದು. ಇಂಥದರಲ್ಲಿ ನೀನು ಭಗವಂತನ ಮಗನೆಂದು ಮನಸ್ಸಿನಲ್ಲಿ ಅರಿತೆಯಾದರೆ ನಿನಗೆ ಜಂಭ ಬಾರದೇ? ನಾವೆಲ್ಲರೂ ಈ ಕಾರಣದಿಂದ ಹೆಮ್ಮೆಪಡಬೇಕು; ಆದರೆ ಪಡುತ್ತಿಲ್ಲ. ನಮ್ಮ ಜನ್ಮದಲ್ಲಿ ಎಲ್ಲ ಜಂತುಗಳ ಭಾಗವಾದ ಈ ದೇಹವೂ, ಭಗವಂತನ ಅಂಶವಾದ ಬುದ್ಧಿಯೂ ಇವೆ. ಇವುಗಳಲ್ಲಿ ಮೊದಲನೆಯದನ್ನು ಹೆಚ್ಚಿಸಿಕೊಳ್ಳುತ್ತೇವೆ. ಉತ್ತಮ ಭಾಗವಾದ ದೈವಿಕಾಂಶವನ್ನು ನಮ್ಮದೆನ್ನುವವರು ಕೇವಲ ಅಲ್ಪ ಸಂಖ್ಯೆಯ ಜನರು."

ತಾನು ದೇವರ ಮಗನೆಂದು ತಿಳಿದವನಿಗೆ ಅಲ್ಪ ಭಾವಗಳು ಬರಲಾರವು. ಇವನು ವಿಶ್ವಕ್ಕೇ ಮಿತ್ರನಾಗುತ್ತಾನೆ. ಇವನಿಗೆ ಲೋಕವೆಲ್ಲ ತೌರು; ಸೃಷ್ಟಿಯೆಲ್ಲ ಒಡಹುಟ್ಟು.

"ನಾವು ದೇವರ ಮಕ್ಕಳೆಂದು ತಿಳಿದಮೇಲೆ ಯಾವನೂ ತನ್ನ ಸೀಮೆ ಯಾವುದೆಂದರೆ ಈ ಊರು ಆ ಊರು ಎಂದು ಹೇಳಲಾಗದು. ನನ್ನ ಊರು ಯಾವುದು? ಪ್ರಪಂಚ. ನಾನು ಅಥೆನ್ಸ್ ನಗರದವನು ಎಂದು ಹೇಳುವೆ ಎನ್ನೋಣ. ಹಾಗೆಂದರೇನು? ನೀನು ಹುಟ್ಟಿದ ಊರೆಂತಲೇ? ನೀನು ಹುಟ್ಟಿದ್ದು ಎನ್ನುವುದು ಬಹು ಸ್ವಲ್ಪ ಸ್ಥಳ ಮಾತ್ರ. ನೀನು ಎಲ್ಲಿಯುವನೆಂದಾಗ ನೀನು ಹುಟ್ಟಿದ ಸ್ಥಳವನ್ನು ಹೇಳುವುದಾದರೆ ನೀನು

ಹುಟ್ಟಿದಷ್ಟಗಲದ ಸ್ಥಳವನ್ನು ಮಾತ್ರ ಹೇಳಬೇಕು. ಇದನ್ನು ಬಿಟ್ಟು ನೀನೂ ನಿಮ್ಮ ಹಿರಿಯರೂ ಹುಟ್ಟಿ ಬಾಳಿದ ಸ್ಥಳಗಳನ್ನೆಲ್ಲಾ ಒಳಕೊಂಡ ರಾಜ್ಯವಾದ್ದರಿಂದ ಅಥೆನ್ಸ್ ನಗರವನ್ನು ನೀನು ನಿನ್ನ ಸ್ಥಳವೆಂದು ಹೇಳುವೆ. ಇದರಂತೆಯೇ ಪ್ರಪಂಚದ ಎಲ್ಲಾ ಭಾಗದಲ್ಲಿಯೂ ಇರುವ ಎಲ್ಲಾ ಜನವೂ ನಮ್ಮ ತಂದೆಯಾದ ಭಗವಂತನ ಮಕ್ಕಳು, ನಮ್ಮ ಅನುಬಂಧಿಗಳು ಎಂದು ತಿಳಿದಮೇಲೆ ನಮ್ಮ ಸ್ಥಳ ಯಾವುದು ಎಂಬ ಭಾವನೆಯು ವಿಶಾಲ ವಾಗುವುದು."

ಇವನು ಜೀವನದಲ್ಲಿ ಎಲ್ಲಿದ್ದರೆ ಅಲ್ಲಿ ಚೆನ್ನಾಗಿ ನಡೆದುಕೊಳ್ಳುತ್ತಾನೆ. ಸಮಾಧಾನದಿಂದ ನಡೆದುಕೊಳ್ಳುತ್ತಾನೆ.

"ನೀನು ಒಂದು ನಾಟಕದಲ್ಲಿ ಒಂದು ಪಾತ್ರವಾಗಿದ್ದೀಯೆಂದೂ, ಪಾತ್ರವು ಎಂಥದಾಗಬೇಕೆಂಬುದನ್ನು ಗ್ರಂಥಕರ್ತನು ನಿರ್ಧರಿಸತಕ್ಕವ ನೆಂದೂ ಜ್ಞಾಪಕವಿರಲಿ. ಪಾತ್ರವು ಸ್ವಲ್ಪವಾಗಿರಬೇಕೆಂದು ಅವನ ಇಷ್ಟ ವಾದರೆ ಅದು ಸ್ವಲ್ಪವಾಗಿರುತ್ತದೆ; ಹೆಚ್ಚಾಗಿರಬೇಕೆಂದರೆ ಹೆಚ್ಚಾಗಿರು ತ್ತದೆ. ನಾಟಕಕಾರನು ನಿನ್ನನ್ನು ಒಬ್ಬ ಬಡವನ ಪಾತ್ರವನ್ನು ಅಭಿನಯಿಸು ವುದಕ್ಕೆ ಅಪೇಕ್ಷಿಸಿದರೆ ನೀನು ಅದನ್ನು ನಿನ್ನ ಕೈಯಲ್ಲಾದಷ್ಟು ಚೆನ್ನಾಗಿ ಅಭಿನಯಿಸಬೇಕು. ಹೀಗೆಯೇ ಒಬ್ಬ ಕುಂಟನಾಗಿರಬೇಕೆಂದರೆ, ಒಬ್ಬ ನ್ಯಾಯಾಧೀಶನಾಗಿರಬೇಕೆಂದರೆ, ಒಬ್ಬ ಸಾಮಾನ್ಯ ಮಾನವನಾಗಿರ ಬೇಕೆಂದರೆ, ನಿನಗೆ ನಿಯೋಜಿಸುವ ಪಾತ್ರವನ್ನು ಅಭಿನಯಿಸುವುದು ನಿನ್ನ ಕೆಲಸ. ಅಭಿನಯಿಸುವುದರಲ್ಲಿ ಚೆನ್ನಾಗಿ ಅಭಿನಯಿಸಬೇಕು. ಪಾತ್ರವನ್ನು ನಿರ್ಧರಿಸುವುದು ಮತ್ತೊಬ್ಬನ ಕೆಲಸ."

ಆದರೆ ಇದೆಲ್ಲ ಅಭ್ಯಾಸದಿಂದ ಬರುವ ಮನೋಧರ್ಮ. ಇದಕ್ಕೆ ವ್ಯವಸಾಯ ಬೇಕು, ಕಾಲ ಬೇಕು.

"ಮನಸ್ಸಿನ ಸಂಸ್ಕಾರವು ಸುಲಭವಾಗಿ ಉಂಟಾಗುವುದಿಲ್ಲ. ನಿನಗೆ ಒಂದು ಅಂಜೂರದ ಹಣ್ಣು ಬೇಕಾಗಿ ಇಂದು ಗಿಡವನ್ನು ಹಾಕುವೆ ಯಾದರೆ, ಗಿಡ ಬೆಳೆಯಬೇಕು ಹೂ ಬಿಡಬೇಕು ಕಾಯಾಗಬೇಕು ಅದು ಹಣ್ಣಾಗಬೇಕು. ಇದಕ್ಕೆಲ್ಲ ಕಾಲ ಬೇಕು. ಮನಸ್ಸಿನ ತಿದ್ದುಪಡಿ ಬರಲು ಹಾಗೆಯೇ ನಿರಂತರವಾದ ಪ್ರಯತ್ನ ಬೇಕು."

ತಿಳುವಳಿಕೆಯಿಂದ ಮನುಷ್ಯನಿಗೆ ಪ್ರಚಂಡವಾದ ಸ್ಥೈರ್ಯವು ಬರುತ್ತದೆ. ಸಾಕ್ರಟೀಸನ ಉಪದೇಶವು ಹಾನಿಕರವೆಂದು ಭಾವಿಸಿ ಅವನಿಗೆ ಶಿಕ್ಷೆಯನ್ನು ಹೊರಿಸಲು ಬಂದ ನ್ಯಾಯಾಧಿಕಾರಿಗಳಿಗೆ ಅವನು ಹೀಗೆಂದನು: "ನೀವು ನನಗೆ ಹೇಳಬಹುದು 'ನಿನ್ನ ಉಪದೇಶವನ್ನು ಬಿಟ್ಟುಬಿಡು. ನಿನ್ನ ಜೀವದಿಂದ ಉಳಿಸುತ್ತೇವೆ' ಎಂದು. ಏನು ಹೇಳುವಿರಿ? ಸೇನಾಧಿಪತಿಯು ನನ್ನನ್ನು ಒಂದು ಕೆಲಸಕ್ಕೆ ನೇಮಿಸಿ ಹೋಗಿರಲು 'ನೀನು ಅದನ್ನು ಬಿಡು. ನಿನ್ನನ್ನು ಉಳಿಸುವೆವು' ಎಂದು ಹೇಳಿದಿರಿ ಎನ್ನಿ. ನಾನು ಅದನ್ನು ಬಿಡ ಬಹುದೇ? ಸೇನಾಧಿಪತಿಯು ಸೈನ್ಯದ ಕೆಲಸ ಒಂದನ್ನು ಸೈನಿಕನೊಬ್ಬನಿಗೆ ನೇಮಿಸುವಂತೆ ದೇವರು ನನಗೆ ಈ ಉಪದೇಶದ ಕೆಲಸವನ್ನು ನೇಮಿಸಿದ್ದಾನೆ. ಇದನ್ನು ಬಿಡಬಹುದೆನ್ನುವುದು ಕೇವಲ ಅವಿವೇಕ" ಎಂದನು.

ಈ ಸ್ಥಿತಿ ಬರುವುದು ಸಾವಕಾಶವಷ್ಟೆ. ಅದುವರೆಗೆ?

"ತಪ್ಪನ್ನು ಮಾಡದೆಯೇ ಇರುವುದು ಸಾಧ್ಯವೆ? ಅಲ್ಲ. ಅದು ಸಾಧ್ಯವಲ್ಲ. ಆದರೆ ನಿರಂತರವೂ ತಪ್ಪುಮಾಡದೆ ಇರೋಣವೆಂದು ಮನಸ್ಸು ಮಾಡುವುದು ಸಾಧ್ಯ. ಕೊನೆಗೆ ಈ ಪ್ರಯತ್ನದಿಂದ ಒಂದೆರಡೇ ತಪ್ಪನ್ನು ಮಾಡದೆ ಇರುವಂತಾದರೂ ಪ್ರಯತ್ನವು ಸಫಲವೆಂದೇ ಹೇಳಬೇಕು. ಇದನ್ನು ನಾಳೆ ಮಾಡುವೆನೆನ್ನಬೇಡ. ನಾಳೆ ಯೋಗ್ಯನಾಗುವೆನೆನ್ನುವುದು ಇಂದು ಅಯೋಗ್ಯನಾಗಿರುವೆನೆಂದು ಹೇಳಿದಂತೆ. ನಾಳೆ ಯೋಗ್ಯ ನಾಗುವುದು ಒಳ್ಳೆಯದಾದರೆ ಇಂದು ಅದು ಮತ್ತೂ ಒಳ್ಳೆಯದು. ಇಂದು ಮಾಡುವುದರಿಂದ ನಾಳೆ ಅದು ಸುಲಭವಾಗುವುದು. ನಾಳೆ ಮಾಡುವೆನೆಂದು ಇಂದು ನೂಕಿದರೆ ನಾಡಿದ್ದು ಮಾಡುವೆನೆಂದು ನಾಳೆ ನೂಕಬಹುದು."

ಎಲ್ಲ ವೇದಾಂತಕ್ಕೂ ಸಾವು ಒರೆಗಲ್ಲು. ಅದನ್ನು ಕುರಿತ ಈ ಭಾವನೆ ವಿಚಾರಶೀಲರಿಗೆಲ್ಲ ಒಪ್ಪತಕ್ಕದ್ದು.

"ಸಾವು ಎಂದರೆ ಹೆದರುವುದು ಹೆಡ್ಡತನ. ಕೆಟ್ಟುದು ಯಾವುದೋ ಅದನ್ನು ತಪ್ಪಿಸಿಕೊಳ್ಳುವುದು ನ್ಯಾಯ. ಸಾವು ಕೆಟ್ಟುದಲ್ಲ. ಏಕೆಂದರೆ ಅದು ಅವಶ್ಯ. ಸಾವನ್ನು ತಪ್ಪಿಸಿಕೊಳ್ಳುವುದು ಹೇಗೆ? ಎಲ್ಲಿ ತಪ್ಪಿಸಿಕೊಳ್ಳ ಬಹುದು? ಯಾವ ಜನರಲ್ಲಿ ಯಾವ ಸ್ಥಳದಲ್ಲಿ ಎಲ್ಲಿ ಅದು ಬರದೇ ಇದೆ?

ಇದರಿಂದ ಬಿಡಿಸುವ ಮಂತ್ರ ಯಾವುದು? ಯಾವುದೂ ಇಲ್ಲದಿದ್ದರೆ ಏನು ಮಾಡೆನ್ನುವೆ? ಸಾವನ್ನಂತೂ ತಪ್ಪಿಸಿಕೊಳ್ಳಲಾಗುವುದಿಲ್ಲ. ಅದರ ಭಯವನ್ನಾದರೂ ತಪ್ಪಿಸಿಕೊಳ್ಳಬಾರದೆ? ಸಾಯುವಾಗ್ಗೆ ಅಂಜಿ ನಡುಗಿ ಕಣ್ಣಿನಲ್ಲಿ ನೀರುಹಾಕಿ ಸಾಯಿ ಎನ್ನುತ್ತೀಯಾ? ದುಃಖವೆನ್ನುವುದೆಲ್ಲ ಅಸಾಧ್ಯವಾದದ್ದನ್ನು ಅಪೇಕ್ಷಿಸುವುದರಿಂದ ಬರುತ್ತದೆ.''

ಈ ಭಾವನೆಯಿಂದ ಮನುಷ್ಯನು ಅತಿ ಸ್ನೇಹವನ್ನು ತೊರೆಯುತ್ತಾನೆ.

''ಎಲ್ಲಾ ಓದು, ಎಲ್ಲಾ ಯೋಚನೆ, ಎಲ್ಲಾ ಬದುಕು ಅತ್ಯುತ್ತಮವಾದ ಶಾಂತಿಗೆ ಸಾಧಕ ಮಾತ್ರ. ಪ್ರಪಂಚದ ಸುಖಗಳನ್ನು ದೇವರು ಕೊಟ್ಟಷ್ಟು ದಿನ ಅನುಭವಿಸಿ ಸಂತೋಷಪಡಬೇಕು. ಅವು ಹೋದ ದಿನ ಸಮಾಧಾನದಿಂದ ಇರಬೇಕು. ನಿನ್ನ ಮಗುವನ್ನೋ ತಮ್ಮನನ್ನೋ ಸ್ನೇಹಿತನನ್ನೋ ಮುದ್ದಿಡುವಾಗ ನಿನ್ನ ಊಹೆಯನ್ನು ವಿಶೃಂಖಲವಾಗಿ ಬಿಡಬೇಡ; ನಿನ್ನ ಆನಂದವು ಮೇರೆ ಮೀರುವಂತೆ ಮಾಡಬೇಡ. ಅದನ್ನು ಹಿಂದಕ್ಕೆ ನೆಳೆ; ಸ್ವಲ್ಪ ತಡೆ. ನೀನು ಪ್ರೀತಿಸುತ್ತಿರುವುದು ಮರ್ತ್ಯಜೀವವೆಂದು ನೆನೆ. ನಿನ್ನ ಪ್ರೇಮದ ವಿಷಯವಾದ ವಸ್ತು ನಿನ್ನ ಸ್ವಂತದ್ದಲ್ಲವೆಂದು ಜ್ಞಾಪಕಮಾಡಿಕೊ. ಅದನ್ನು ನಿನಗೆ ಕೊಟ್ಟಿರುವುದು ಕ್ಷಣ ಮಾತ್ರಕ್ಕಾಗಿ, ಶಾಶ್ವತವಾಗಿ ಅಲ್ಲ. ಋತುವನ್ನನುಸರಿಸಿ ದೊರೆಯುವ ಮಾವು ಅಥವಾ ದ್ರಾಕ್ಷಿ ಹಣ್ಣಿನಂತೆ ಆಯಾ ಕಾಲ ಮಾತ್ರಕ್ಕೆ ಅದು ನಿನ್ನದು. ಚಳಿಗಾಲದಲ್ಲಿ ನೀನು ಆ ಹಣ್ಣನ್ನು ಅಪೇಕ್ಷಿಸಿದರೆ ನೀನು ಹೆಡ್ಡನು. ನಿನ್ನ ಮಗನನ್ನಾಗಲಿ ಸ್ನೇಹಿತರನ್ನಾಗಲಿ ಜೊತೆಯಲ್ಲಿರಿಸಿಕೊಳ್ಳುವುದಕ್ಕೆ ಪ್ರಾಪ್ತಿಯಿಲ್ಲದಮೇಲೆ ಅವನ ಸಹವಾಸವನ್ನು ನೀನು ಅಪೇಕ್ಷಿಸುವುದಾದರೆ ಚಳಿಯ ದಿವಸ ಮಾವಿನ ಹಣ್ಣನ್ನು ಅಪೇಕ್ಷಿಸುವಂತೆ.''

ಎಪಿಕ್ಟಿಟಸನ ಉಪದೇಶದಲ್ಲಿ ಅವನ ವಿಶಾಲವಾದ ಪ್ರಪಂಚ ಜ್ಞಾನವು ವ್ಯಕ್ತವಾಗುತ್ತದೆ. ಈ ಗುಣ ಚೆನ್ನಾಗಿ ಕಾಣುವ ಇನ್ನು ಕೆಲವು ಮಾತುಗಳನ್ನು ಇಲ್ಲಿ ಹೇಳಬಹುದು. ಜನರ ಮೆಚ್ಚುಗೆಯನ್ನಪೇಕ್ಷಿಸುವುದು ಒಂದು ವಿಧದ ದೌರ್ಬಲ್ಯ. ಇದಿಲ್ಲದವರೇ ಇಲ್ಲ. ಇದರ ವಿಚಾರವಾಗಿ ಈತನ ಮಾತು ಬಹಳ ಚೆನ್ನಾಗಿದೆ.

"ನಿನ್ನನ್ನು ಜನರು ಮೆಚ್ಚಬೇಕೆನ್ನುವೆಯಾ? ಅನುಕೂಲವಾದ ಪದವಿಯನ್ನು ಹೊಂದಿದವನು ಮತ್ತೇನನ್ನೂ ಕುರಿತು ಗೋಗರೆಯುವುದಿಲ್ಲ. ನೀನು ತತ್ತ್ವವನ್ನು ತಿಳಿದವನು. ವಿಶ್ವನೀತಿಗೆ ಅನುಸಾರವಾಗಿ ನಡೆಯುತ್ತಿರುವೆ. ಇದು ಒಳ್ಳೆಯದು ಇದು ಕೆಟ್ಟದು ಎಂದು ತಿಳಿದಿರುವೆ. ಇನ್ನೇನಾಗಬೇಕು? ತತ್ತ್ವಜ್ಞನಾಗಿರುವುದು ಸಾಲದು. ಆಹಾ ಎಂತಹ ತತ್ತ್ವಜ್ಞನು ಎಂದು ಜನರು ಕೂಗಬೇಕು. ಅಯ್ಯೋ ನೀನು ಯಾರ ಮೆಚ್ಚಿಗೆಯನ್ನಪೇಕ್ಷಿಸುವೆಯೋ ಅವರು ಯಾರು? ನೀನೇ ಇವರನ್ನು ಅಜ್ಞರೆನ್ನುವೆ, ಹುಚ್ಚರೆನ್ನುವೆ. ನಿನಗೆ ಹುಚ್ಚರ ಮೆಚ್ಚುಗೆ ಬೇಕೆ?"

ದೂಷಿಸುವವರನ್ನು ಕುರಿತ ಮಾತು ಹೀಗೆಯೇ ಚಮತ್ಕಾರವಾಗಿದೆ.

"ನಿಂದಿಸುವವನು ನಿನಗೆ ನೋಯಲೆಂದು ನಿಂದಿಸುವನು. ನೀನು ಅದನ್ನು ಗಮನಿಸದೆ ನಿಂತಲ್ಲಿ ಅವನ ಪ್ರಯತ್ನವು ವಿಫಲವಾಯಿತು. ಅವನು ನಿಂದಿಸಿದನೆಂದು ನೀನು ಕುದಿದರೆ ನೀನು ಅವನಿಗೆ ಜಯವನ್ನು ಕೊಟ್ಟಂತಾಯಿತು."

ತತ್ತ್ವವನ್ನು ಜನರಿಗೆ ಹೇಳುವ ವಿಚಾರದಲ್ಲಿಯ ಈ ಮಾತು ನೆನಪಿನಲ್ಲಿರಬೇಕಾದದ್ದು.

"ತತ್ತ್ವವನ್ನೆಲ್ಲಾ ಎಲ್ಲರಿಗೂ ತಿಳಿಸಬೇಕಾದದ್ದಿಲ್ಲ. ಅವರವರ ಯೋಗ್ಯತೆಗೆ ತಕ್ಕಷ್ಟನ್ನು ಅವರವರಿಗೆ ತಿಳಿಸಬೇಕು."

ಇವನ ವಿಶಾಲವಾದ ಜ್ಞಾನವು ಉದಾರವಾದದ್ದು; ಧೀರವಾದದ್ದು.

"ಮನುಷ್ಯರು ತಪ್ಪನ್ನು ಮಾಡುವುದು ತಿಳಿವಳಿಕೆಯಿಲ್ಲದ್ದರಿಂದ. ತಪ್ಪನ್ನು ಉದ್ದೇಶಿಸಿರುವವನಿಗೆ ಅದು ಹೇಗೆ ತಪ್ಪೆಂದು ಸ್ಪಷ್ಟವಾಗಿ ತಿಳಿಸಿದರೆ ಅವನು ಅದನ್ನು ಮಾಡುವುದಿಲ್ಲ."

"ಚಕ್ರವರ್ತಿಯು ಬಾಹ್ಯವಾದ ಶಾಂತಿಯನ್ನು ಕೊಡುವನು. ದೇವರು ಆಂತರ್ಯವಾದ ಶಾಂತಿಯನ್ನು ಕೊಡುವನು."

ಈ ಮಾತು ಉಪದೇಶಿಸುವ ಆತ್ಮಾವಲಂಬನವು ಎಲ್ಲರಿಗೂ ಬೇಕಾದದ್ದು.

"ದೇವರೇ, ನನಗೆ ದಿಕ್ಕಿಲ್ಲವೇ ಎನ್ನುವುದಕ್ಕೆ ಬದಲಾಗಿ ದೇವರು ಕೊಟ್ಟಿರುವ ಬುದ್ಧಿಯನ್ನೂ ಶಕ್ತಿಯನ್ನೂ ಉಪಯೋಗಿಸಿ ಸುಖಿಯಾಗು."

ನನಗೆ ಅದಿಲ್ಲವಲ್ಲಾ, ಇದಿಲ್ಲವಲ್ಲಾ ಎನ್ನುವವರನ್ನು ಅಥವಾ ಇಲ್ಲದ್ದನ್ನು ಸಣ್ಣ ವಿಷಯವೆಂದು ಹಳಿಯುವವರನ್ನು ತಿದ್ದುವ ಈ ಬುದ್ಧಿವಾದ ಬಹಳ ಬೆಲೆಯುಳ್ಳದ್ದು.

"ನಿನಗೆ ಮಾತಿನ ಶಕ್ತಿಯಿಲ್ಲವೆಂದು ಕೊರಗಬೇಡ. ಅಥವಾ ಅದು ಸಣ್ಣ ವಿಷಯವೆಂದು ಹಳಿಯಬೇಡ. ಅದೂ ಒಂದು ಒಳ್ಳೆಯ ಶಕ್ತಿ. ಅದು ಇರುವವರು ಅಷ್ಟರಮಟ್ಟಿಗೆ ಪುಣ್ಯವಂತರು. ನಿನಗೆ ಅದಿಲ್ಲದಿದ್ದರೆ ನಿನಗೆ ಇರುವ ಇತರ ಶಕ್ತಿಗಳನ್ನು ವೃದ್ಧಿಪಡಿಸಿಕೊ."

ನಿಜವಾದ ಚೆಲುವು ಯಾವುದು ಎನ್ನುವ ಈ ಮಾತು ಸೊಗಸಾಗಿದೆ.

"ಮನುಷ್ಯನ ಚೆಲುವು ಅವನ ನಡತೆ ಚೆನ್ನಾಗಿರುವುದರಲ್ಲಿ, ಅವನ ಬುದ್ಧಿಗೆ ಅನುಸಾರವಾಗಿ ಬದುಕುವುದರಲ್ಲಿ, ಇದೆ. ಅಥವಾ ದೇಹವನ್ನು ಅವನು ಚೆನ್ನಾಗಿ ಇರಿಸಿಕೊಳ್ಳುವುದಾದರೆ ಅವನು ಮೈಯನ್ನು ಸ್ವಭಾವಕ್ಕೆ ಅನುಸಾರವಾಗಿ ಶೃಂಗರಿಸಬೇಕು. ಗಂಡಸಾದವನು ಹೆಂಗಸರಂತೆ ಸೊಗಸು ಮಾಡಿಕೊಳ್ಳುವುದು ಅವಲಕ್ಷಣ."

ಆದರೆ ತಪ್ಪುರೀತಿಯ ಚೆಲುವನ್ನು ಆಶಿಸುವ ಯುವಕನ ವಿಷಯದಲ್ಲಿ ಇವನಿಗೆ ಅಸಮಾಧಾನವಿಲ್ಲ.

"ತತ್ತ್ವವನ್ನು ಹುಡುಕುತ್ತ ಬರುವ ಯುವಕನು ತಾನು ಲಕ್ಷಣವಾಗಿ ಕಾಣಬೇಕೆಂದು ಅಪೇಕ್ಷಿಸುವವನಾದರೆ ಅವನು ತತ್ತ್ವವನ್ನು ಕಲಿಯಬಹುದೆಂಬ ಭರವಸೆ ಉಂಟು. ಅವನು ಸೌಂದರ್ಯವನ್ನಪೇಕ್ಷಿಸುತ್ತಾನೆ. ಮನುಷ್ಯನ ಸೌಂದರ್ಯವು ಮುಖ್ಯವಾಗಿ ಬುದ್ಧಿಗೆ ಸಂಬಂಧಪಟ್ಟುದೆಂದೂ ದೇಹಕ್ಕೆ ಸಂಬಂಧಪಟ್ಟದ್ದಲ್ಲವೆಂದೂ ಅವನಿಗೆ ತಿಳಿಸಿದರೆ ಅವನು ಈ ನಿಜವಾದ ಸೌಂದರ್ಯವನ್ನು ಅನುಷ್ಠಾನಮಾಡುವನು."

ಶುಚಿಯನ್ನು ಕುರಿತು :

"ಶುಚಿ ಎನ್ನುವುದು ಮುಖ್ಯವಾಗಿ ತತ್ತ್ವತಃ ಆತ್ಮಕ್ಕೆ ಸಂಬಂಧಪಟ್ಟದ್ದು. ಅಶುಚಿಯೂ ಹಾಗೆಯೇ. ಮನಸ್ಸನ್ನು ಶುಚಿಯಾಗಿಟ್ಟು

ಕೊಳ್ಳುವುದನ್ನು ಮುಖ್ಯವಾಗಿ ಗಮನಿಸಿ ಅದರೊಂದಿಗೆ ದೇಹವನ್ನು ಶುಭ್ರವಾಗಿ ಇಟ್ಟುಕೊಳ್ಳಬೇಕು."

ಈ ಮಾತು ಒಂದು ಸೂತ್ರ.

"ನೀನು ಒಂದು ಸಣ್ಣ ಆತ್ಮ. ಒಂದು ಶವವನ್ನು ಹೊತ್ತು ಕೊಂಡು ಓಡಿಯಾಡುತ್ತಿದೀಯೆ."

ಇತರರ ಕಷ್ಟವನ್ನು ಕೇಳಿದಾಗ ನಾವು ವೇದಾಂತ ಹೇಳುತ್ತೇವೆ. ನಮ್ಮ ಕಷ್ಟದಲ್ಲಿ ಅದೇ ತಾಳ್ಮೆಯನ್ನು ತೋರಿದರೆ ನಾವು ತತ್ತ್ವಜ್ಞರೇ ಸರಿ.

"ಮತ್ತೊಬ್ಬನ ಸೇವಕನು ಅವನ ಪಾತ್ರೆಯನ್ನು ಕುಕ್ಕಿದಾಗ ನಾವು ಸಂಸಾರವೇ ಹೀಗೆ ಎಂದು ಒಡನೆ ಹೇಳುತ್ತೇವೆ. ನಮ್ಮ ಪಾತ್ರೆಯನ್ನು ಕುಕ್ಕಿದಾಗಲೂ ಹೀಗೆಯೇ ಹೇಳಬೇಕು. ಪಾತ್ರೆ ಕುಕ್ಕಿದ ಸಂದರ್ಭದಲ್ಲಿ ಹೇಗೆಯೋ ದೊಡ್ಡ ಸಂದರ್ಭಗಳಲ್ಲಿಯೂ ಇದೇ ಸೂತ್ರವನ್ನನುಸರಿಸು. ಮತ್ತೊಬ್ಬರ ಹೆಂಡತಿಯೋ ಮಗುವೋ ತೀರಿಹೋದರೆ ನಮ್ಮಲ್ಲಿ ಮನುಷ್ಯರ ಬಾಳೇ ಹೀಗೆ ಎಂದು ಹೇಳದವರಿಲ್ಲ. ತನ್ನ ಹೆಂಡತಿ ಅಥವಾ ಮಗು ಹೋದಾಗ ಒಡನೆಯೇ ಅಯ್ಯೋ ನನ್ನ ದುರದೃಷ್ಟವೇ ಎನ್ನುತ್ತೇವೆ. ಮತ್ತೊಬ್ಬರಿಗೆ ಹೀಗಾದಾಗ ನಾವು ಏನು ಹೇಳಿದೆವೆಂಬುದನ್ನು ನಾವು ಜ್ಞಾಪಕದಲ್ಲಿಡಬೇಕು."

ಮನುಷ್ಯನ ಮಾತಿನಲ್ಲಿ ನಾನು ಎನ್ನುವುದು ಹೆಚ್ಚಾಗಬಾರದೆಂದು ಎಪಿಕ್ಟಿಟಸನು ಹೀಗೆ ಹೇಳುತ್ತಾನೆ.

"ನಿನ್ನ ಮಾತಿನಲ್ಲಿ ನನಗೆ ಹೀಗಾಯಿತು ಹಾಗಾಯಿತು ಎಂದು ಅತಿಯಾಗಿ ನಿನ್ನ ಕಥೆಯನ್ನೇ ಹೊಗಳಬೇಡ. ನಿನ್ನ ಆಗುಹೋಗಿನಲ್ಲಿ ನಿನಗಿರುವ ಶ್ರದ್ಧೆ, ಅದರ ಕಥನದಲ್ಲಿ ನಿನಗಿರುವ ಸಂತೋಷ, ಅದನ್ನು ಕೇಳುವುದರಲ್ಲಿ ಇತರರಿಗೆ ಇರುವುದಿಲ್ಲ."

ಜನವನ್ನು ನಗಿಸುವುದು ದೊಡ್ಡದೆಂದು ಎಣಿಸಬಾರದು.

"ಜನರನ್ನು ನಗಿಸುವ ಪದ್ಧತಿ ಬೇಡ. ಈ ಅಭ್ಯಾಸದಿಂದ ಒರಟುತನ ಉಂಟಾಗುತ್ತದೆ. ನಿನ್ನ ವಿಷಯದಲ್ಲಿ ಇತರರಿಗೆ ಗೌರವ ಕಡಿಮೆಯಾಗಬಹುದು."

ಎಲ್ಲ ವಿಷಯದಲ್ಲೂ ಎರಡು ನಿಲುವು ಸಾಧ್ಯ. ಒಂದರಿಂದ ಅದು ತಪ್ಪಾಗಿ ಕಾಣುತ್ತದೆ; ಇನ್ನೊಂದರಿಂದ ಅದು ಸಮ್ಮತವಾಗುತ್ತದೆ.

"ಒಂದೊಂದು ವಿಷಯಕ್ಕೂ ಎರಡು ಹಿಡಿ ಉಂಟು. ಒಂದರಿಂದ ಹಿಡಿದರೆ ಅದನ್ನು ನೀನು ಧರಿಸಬಹುದು; ಇನ್ನೊಂದರಿಂದ ಹಿಡಿದರೆ ಧರಿಸಲಾಗದು. ನಿನ್ನ ಒಡಹುಟ್ಟಿದವನು ನಿನಗೆ ಕೆಟ್ಟುದನ್ನು ಮಾಡಿದನೆನ್ನು. ಕೆಟ್ಟುದನ್ನು ಮಾಡಿದನೆಂಬ ಹಿಡಿಯಿಂದ ಆ ವಿಷಯವನ್ನು ವಿಮರ್ಶಿಸಬೇಡ. ಹಾಗೆ ಮಾಡಿದವನು ನಿನ್ನ ಒಡಹುಟ್ಟು ಎಂಬ ಹಿಡಿಯಿಂದ ವಿಮರ್ಶಿಸು. ಹೀಗೆ ಮಾಡಿದರೆ ಅವನ ಕೃತ್ಯವನ್ನು ನೀನು ಸಹಿಸುವುದಕ್ಕಾಗುತ್ತದೆ."

ಒಂದೊಂದು ಸಂದರ್ಭದಲ್ಲಿಯೂ ಒಂದೊಂದು ಗುಣವು ಬೇಕಾಗುತ್ತದೆ. ಆಯಾ ಸಂದರ್ಭದಲ್ಲಿ ಪ್ರಾಜ್ಞರು ಆಯಾ ಗುಣವನ್ನು ಮುಂದಿರಿಸಿಕೊಂಡು ಸೌಜನ್ಯವನ್ನು ರಕ್ಷಿಸಿಕೊಳ್ಳಬೇಕು.

ನಿಜವಾದ ಮೈತ್ರಿಯನ್ನು ಕುರಿತು:

"ಸುಖದಲ್ಲಿರುವಾಗ ಒಬ್ಬರಿಗೊಬ್ಬರು ಸ್ನೇಹ ತೋರುವವರನ್ನು ಮಿತ್ರರೆನ್ನಬೇಡ. ಒಂದು ವಸ್ತು ಇಬ್ಬರಿಗೂ ಬೇಕಾದಾಗ ಯಾರು ಜಗಳ ಮಾಡದೆ ಇರುವರೋ ಅವರು ಮಿತ್ರರು. ಇದು ದುಸ್ಸಾಧ್ಯ. ಹೊರಗಣ ಇಚ್ಛೆ ಯಾವುದೂ ಇಲ್ಲದವರು ಮಾತ್ರ ಒಬ್ಬರಿಗೊಬ್ಬರು ಮಿತ್ರರಾಗಿರಬಹುದು."

ಪೊಳ್ಳು ವೈರಾಗ್ಯವನ್ನು ಕುರಿತು:

"ಸಣ್ಣ ವಯಸ್ಸಿನ ಮನುಷ್ಯನು ಸತ್ತನೆಂದರೆ ಮುದುಕನಾದವನು, 'ದೇವರು ಚಿಕ್ಕವನನ್ನು ಕೊಂದನು. ವಿಶ್ರಾಂತಿ ಬೇಡುವ ನನ್ನನ್ನು ಉಳಿಸಿದನು' ಎಂದು ದೇವರಲ್ಲಿ ದೋಷವನ್ನು ಆರೋಪಿಸುವನು. ಇದೇ ಮುದುಕನಿಗೆ ಸಾವು ಸಮೀಪಿಸಿದರೆ ವೈದ್ಯನನ್ನು ಕರೆಯಕಳುಹಿಸಿ ಏನಾದರೂ ಮಾಡಿ ನನ್ನನ್ನು ಉಳುಹು ಎನ್ನುವನು. ಮನುಷ್ಯನಿಗೆ ಇರುವುದಕ್ಕೂ ಇಷ್ಟವಿಲ್ಲ, ಹೋಗುವುದಕ್ಕೂ ಇಷ್ಟವಿಲ್ಲ."

ಅನೇಕವೇಳೆ ವಿವಾದಕ್ಕೆ ಕಾರಣ ಸೂತ್ರದಲ್ಲಿ ಅಲ್ಲ; ಅದರ ಅನ್ವಯದ ವಿಚಾರದಲ್ಲಿ ಬರುತ್ತದೆ.

"ಜನರಲ್ಲಿ ಒಬ್ಬರೊಬ್ಬರಿಗೆ ಮೂಲ ತತ್ತ್ವಗಳನ್ನು ಕುರಿತು ವಾದ ಬರುವುದಿಲ್ಲ. ಆ ತತ್ತ್ವಗಳನ್ನು ಯಾವುದಾದರೂ ಸಂದರ್ಭದಲ್ಲಿ ಅನ್ವಯ ಮಾಡುವುದರಲ್ಲಿ ವಾದ ಹುಟ್ಟುತ್ತದೆ. ಯೇಹೂದ್ಯರಿಗೂ ಸಿರಿಯನ್ ಜನರಿಗೂ, ಹಾಗೆಯೇ ಈಜಿಪ್ಟರಿಗೂ ರೋಮನರಿಗೂ ವಿವಾದವುಂಟಾಗಿರುವುದು ಇದೇ ರೀತಿ. ಪರಿಶುದ್ಧತೆ ಬೇಕೇ ಬೇಡವೇ ಎಂದು ಚರ್ಚೆ ಬರುವುದಿಲ್ಲ. ಹಂದಿಯ ಮಾಂಸವನ್ನು ತಿನ್ನುವುದು ಪರಿಶುದ್ಧತೆಗೆ ವಿರೋಧವೆ, ಅನುಗುಣವೆ ಎಂಬಲ್ಲಿ ವ್ಯತ್ಯಾಸ ಬರುತ್ತದೆ. ಹೀಗೆಯೇ ಯಾರಿಬ್ಬರಲ್ಲಿ ಬರುವ ವಾದದಲ್ಲಿಯೂ ಮೂಲ ತತ್ತ್ವದಲ್ಲಿ ಭೇದವುಂಟಾಗುವುದಿಲ್ಲ; ಅದರ ಸಮಾರೋಪಣದಲ್ಲುಂಟಾಗುತ್ತದೆ."

ಅಧಿಕಾರಿಯೊಬ್ಬನು ಎಪಿಕ್ಟಿಟಸನ ಉಪದೇಶವನ್ನು ಸುಮ್ಮನೆ ಕೇಳುವುದಕ್ಕೆಂದು ಬಂದಾಗ ಅವನು ಹೀಗೆಂದನು.

"ನೀನು ಏನನ್ನೂ ಅಪೇಕ್ಷಿಸದವನಂತೆ ನನ್ನ ಬಳಿಗೆ ಬಂದಿದ್ದೀಯೆ. ನಿನಗೆ ಏನೂ ಬೇಕಾಗಿಲ್ಲವೆಂದು ತೋರುವುದು ನಿಜ. ನಿನಗೆ ಐಶ್ವರ್ಯವಿದೆ; ಹೆಂಡತಿ ಇದ್ದಾಳೆ; ಮಕ್ಕಳಿದ್ದಾರೆ; ಅನೇಕ ಸೇವಕರಿದ್ದಾರೆ. ಚಕ್ರವರ್ತಿಗೆ ನಿನ್ನ ಗುರುತು ಉಂಟು. ನಿನಗೆ ರೋಂ ನಗರದ ತುಂಬ ಸ್ನೇಹಿತರಿದ್ದಾರೆ. ನೀನು ಮಾಡಬೇಕಾದ ಕೆಲಸವನ್ನು ಮಾಡುತ್ತಿದ್ದೀಯೆ. ಉಪಕಾರಕ್ಕೆ ಪ್ರತ್ಯುಪಕಾರವನ್ನೂ ಅಪಕಾರಕ್ಕೆ ಪ್ರತೀಕಾರವನ್ನೂ ಮಾಡುವುದನ್ನು ಬಲ್ಲೆ. ನಿನಗೇನು ಕಮ್ಮಿ? ಆದರೂ ನೀನು ಸುಖಿಯಾಗುವುದಕ್ಕೆ ಅತ್ಯವಶ್ಯಕವಾದ ವಸ್ತು ನಿನಗಿಲ್ಲವೆಂದು ನೀನು ಕಾಣೆ. ದೇವರು ಎಂದರೇನು? ಮನುಷ್ಯನೆಂದರೇನು? ಕೆಟ್ಟುದು ಯಾವುದು? ಒಳ್ಳೆಯದು ಯಾವುದು? ಎಂಬುದನ್ನು ನೀನು ಅರಿಯೆ. ಈ ಮಾತನ್ನು ನೀನು ಹೇಗೆ ಒಪ್ಪುವೆ? ನೀನು ಅಸಹ್ಯಪಟ್ಟುಕೊಂಡು ಹೊರಟುಹೋಗುವೆ. ಆದರೆ ಅಸಹ್ಯವೇಕೆ? ಸಹಿಸಲಾಗದ ಕೆಟ್ಟುದು ಯಾವುದನ್ನು ನಾನು ನಿನಗೆ ಮಾಡಿದೆನು? ನಿನ್ನ ಮುಖವಿರುವ ರೀತಿಯನ್ನು ತೋರಿಸುವ ಕನ್ನಡಿ ನಿನಗೆ ಕೆಟ್ಟುದನ್ನು ಮಾಡಿತೆ? ರೋಗಿಗೆ ಆಲಸ್ಯದ ಕಾರಣವನ್ನು ತಿಳಿಸುವ ವೈದ್ಯನು ಅವನಿಗೆ ಅವಮಾನ ಮಾಡಿದಂತಾಯಿತೆ? ನಿನ್ನ ಆಸೆಗಳು ಸರಿಯಾಗಿಲ್ಲ; ನಿನ್ನ ಮನಸ್ಸು ಶುದ್ಧವಾಗಿಲ್ಲ; ನಿನ್ನ ನಡತೆ ವಿಶ್ವನೀತಿಗೆ

ಅನುಸಾರವಾಗಿಲ್ಲ ಎಂದು ಹೇಳಿದರೆ ಮಾತ್ರ ಕೆಟ್ಟುದನ್ನು ಮಾಡಿದಂತೆ ಅವಮಾನಪಡಿಸಿದಂತೆ ಜನರು ಎಣಿಸುತ್ತಾರೆ. ಲೋಕದಲ್ಲಿ ಜನರು ನೆರೆದಿರುವ ರೀತಿಯು ಒಂದು ದನಗಳ ಜಾತ್ರೆಯಂತೆ. ಕೆಲವು ಜನರು ದನಗಳು; ಕೆಲವರು ಜಾತ್ರೆಗೆ ನೋಡಬಂದವರು; ಕೆಲವರು ಜಾತ್ರೆಯಲ್ಲಿ ಕೊಳ್ಳುವರು. ಮನೆ ಮಠವೆಂದು ಯೋಚನೆಯಲ್ಲಿಯೇ ಇರುವ ಜನಗಳು ಜಾತ್ರೆಯಲ್ಲಿ ದನಗಳು; ಮಿಕ್ಕ ಯೋಚನೆಯನ್ನೆಲ್ಲ ಬಿಟ್ಟು ಹುಲ್ಲು ಮೇಯು ವುದರಲ್ಲಿ ನಿರತವಾಗಿರುವ ದನದ ಹಾಗೆ ನಿನ್ನಂಥವರು ಆಸ್ತಿಯ ಸಂಪಾದನೆ ಯಲ್ಲಿಯೇ ಮಗ್ನರಾಗಿರುತ್ತಾರೆ. ಈ ಸೃಷ್ಟಿಯನ್ನು ಮಾಡಿಸಿದವನು ಯಾರು? ನಡೆಸುವವನು ಯಾರು? ಇಲ್ಲಿ ಏನು ನಡೆಯುತ್ತಿದೆ? ಎನ್ನು ವವರು ಕೆಲವರು ಮಾತ್ರ. ಇವರು ಜಾತ್ರೆಯಲ್ಲಿ ಸಂತೋಷಪಡುವುದಕ್ಕೆ ಬಂದವರು. ಒಂದು ನಗರದಲ್ಲಿ ಒಂದು ಮನೆಯಲ್ಲಿ ನಡೆಸುವ ಕರ್ತನಿಲ್ಲದೆ ಬದುಕು ನಡೆಯುವುದಿಲ್ಲ. ಹಾಗಾದರೆ ನಮ್ಮ ಸೃಷ್ಟಿಯ ವಿಚಾರ ಇದೇ ಯೋಚನೆಯನ್ನು ಮಾಡಬೇಕಲ್ಲವೆ? ಸಾತ್ವಿಕರು ಈ ವಿಷಯಗಳನ್ನು ಕುರಿತು ವಿಚಾರವನ್ನು ಮಾಡುವುದನ್ನು ನೋಡಿ ಸಾಮಾನ್ಯರು ನಗುವರು, ನಿಜ. ಜಾತ್ರೆಯನ್ನು ನೋಡುವವರ ಸ್ಥಿತಿ ದನಗಳಿಗೆ ತಿಳಿಯುವುದಾದರೆ ಅವೂ ಕೂಡ ಅವರನ್ನು ನೋಡಿ ನಗುತ್ತಿದ್ದುವು. ಹುಲ್ಲು ನೀರು ಇರು ವಾಗ ಇವುಗಳನ್ನು ಬಿಟ್ಟು ಇವರು ಏನೇನೋ ಯೋಚನೆ ಮಾಡುತ್ತಾರೆ, ಏಕೋ, ಎನ್ನುತ್ತಿದ್ದವು.”

ತತ್ತ್ವದ ಹೆಸರು ಹೇಳುವವರು ಅದಕ್ಕೆ ತಕ್ಕಂತೆ ನಡೆದುಕೊಳ್ಳ ದಿದ್ದರೆ ಅದು ತತ್ತ್ವದ ತಪ್ಪಲ್ಲ; ಆದರ ಹೆಸರು ಹೇಳುವವರ ತಪ್ಪು ಎನ್ನುವ ಈ ಮಾತು ಬಹಳ ಮುಖ್ಯವಾದದ್ದು.

“ಬಡಗಿ ಎಂದು ಹೆಸರಿಟ್ಟುಕೊಂಡಿರುವವನು ಮರದ ಕೆಲಸವನ್ನು ಚೆನ್ನಾಗಿ ಮಾಡದಿದ್ದರೆ ಜನರು ಇವನು ಬಡಗಿಯಲ್ಲ, ಬರಿಯ ಮಾತಿನವನು ಎನ್ನುವರು. ತತ್ತ್ವಜ್ಞನೆಂದು ಬಂದವನು ತತ್ತ್ವಜ್ಞನಂತೆ ನಡೆದುಕೊಳ್ಳ ದಿದ್ದರೆ ಇವನು ತತ್ತ್ವಜ್ಞನಲ್ಲ ಎಂದು ಹೇಳುವುದಿಲ್ಲ, ತತ್ತ್ವ ಉಪಯೋಗ ವಿಲ್ಲ ಎನ್ನುವರು. ಇದು ತಪ್ಪು. ಬಡಗಿ ಎಂದು ಬಂದವನು ಕೆಲಸ ಬಾರದವ ನಾಗಿದ್ದರೆ ಬಡಗಿಯತನಕ್ಕೆ ಕುಂದಿಲ್ಲ. ಬರಿಯ ಹೆಸರು ವೇಷದಿಂದ

ಯಾರೂ ಬಡಗಿಯೂ ಆಗುವುದಿಲ್ಲ ತತ್ತ್ವಜ್ಞನೂ ಆಗುವುದಿಲ್ಲ. ತತ್ತ್ವಜ್ಞನೆಂದು ಹೆಸರಿಟ್ಟುಕೊಳ್ಳುವ ಕೆಲವರು ವೇಷಕ್ಕೆ ಕೆಲವು ಬಟ್ಟೆಯನ್ನು ಹಾಕಿಕೊಂಡು ಗಡ್ಡವನ್ನು ಬೆಳೆಸಿ ನಾವು ತತ್ತ್ವಜ್ಞರು ಎಂದು ಹೇಳಿಕೊಳ್ಳುವರು. ವೀಣೆಯನ್ನು ಕೊಂಡುಕೊಂಡ ಮಾತ್ರಕ್ಕೆ ಯಾರೂ ನಾನು ಸಂಗೀತಗಾರನೆಂದು ಹೇಳಿಕೊಳ್ಳುವುದಿಲ್ಲ. ಸಂಗೀತಗಾರನೆನ್ನುವನು ತನ್ನ ಕಲೆಗೆ ತಕ್ಕ ಸಲಕರಣೆಯನ್ನು ಒದಗಿಸಿಕೊಳ್ಳುವನೆಂಬುದು ನಿಜ. ಆದರೆ ಅವನಿಗೆ ಸಂಗೀತಗಾರನೆಂಬ ಹೆಸರು ಬರುವುದು ಅವನ ಕಲೆಯಿಂದ, ಸಲಕರಣೆಯಿಂದಲ್ಲ. ಸಾಕ್ರಟೀಸನು ತತ್ತ್ವಜ್ಞನಾದರೂ ತತ್ತ್ವಜ್ಞನ ವೇಷವನ್ನು ಹಾಕದೆ ಇದ್ದುದರಿಂದ ಅನೇಕರು ಅವನ ಬಳಿ ಬಂದು ನಮ್ಮನ್ನು ತತ್ತ್ವಜ್ಞನ ಬಳಿಗೆ ಕರೆದುಕೊಂಡು ಹೋಗು ಎನ್ನುವರು. ಅವನು ನಾನು ತತ್ತ್ವಜ್ಞನಲ್ಲವೋ ಎಂದು ಕೇಳುತ್ತಿರಲಿಲ್ಲ; ತನ್ನನ್ನು ತತ್ತ್ವಜ್ಞನೆಂದು ಎಣಿಸಲಿಲ್ಲವಲ್ಲ ಎಂದು ಅಸಮಾಧಾನಪಡುತ್ತಿರಲಿಲ್ಲ. ಹಾಗೆ ಬಂದವರನ್ನು ತತ್ತ್ವಜ್ಞರೆನ್ನುವವರ ಬಳಿಗೆ ಕರೆದುಕೊಂಡು ಹೋಗುತ್ತಿದ್ದನು. ತಾನು ತತ್ತ್ವದ ಅನುಷ್ಠಾನದಲ್ಲಿ ಸಂತೋಷಪಡುತ್ತಿದ್ದನು.''

ಉದ್ಧಾರವಾಗುತ್ತಿರುವ ಜೀವನ ಲಕ್ಷಣವನ್ನು ಕುರಿತ ಈ ಮಾತುಗಳನ್ನು ಹೇಳಿ ಈ ಉಪದೇಶದ ಸಂಗ್ರಹವನ್ನು ಮುಗಿಸಬಹುದು.

"ಉದ್ಧಾರವಾಗುತ್ತಿರುವ ಮನುಷ್ಯನ ಚಿಹ್ನೆಯಿದು. ಅವನು ಒಬ್ಬರನ್ನು ಸ್ತೋತ್ರಮಾಡುವುದಿಲ್ಲ; ಒಬ್ಬರನ್ನು ದೂಷಿಸುವುದಿಲ್ಲ; ಒಬ್ಬರನ್ನು ದೂರುವುದಿಲ್ಲ. ತಾನು ಪ್ರಮುಖನೆಂಬಂತಾಗಲಿ, ಪ್ರಾಜ್ಞನೆಂಬಂತಾಗಲಿ ತನ್ನನ್ನು ಕುರಿತು ನುಡಿಯುವುದಿಲ್ಲ. ಯಾರಾದರೂ ತನ್ನನ್ನು ಪ್ರಶಂಸಿಸಿದರೆ, ಪ್ರಶಂಸೆಯನ್ನು ಕುರಿತು ತನ್ನೊಳಗೆ ತಾನೇ ನಗುವನು; ಯಾರಾದರೂ ದೂಷಿಸಿದರೆ ಆತ್ಮಸಮರ್ಥನಕ್ಕೆ ತೊಡಗುವುದಿಲ್ಲ. ರೋಗದಿಂದ ಗುಣಹೊಂದಿರುವ ಮನುಷ್ಯನು ಆರೋಗ್ಯವು ದೃಢವಾಗುವವರೆಗೆ ದೇಹದ ವಿಷಯದಲ್ಲಿ ಎಚ್ಚರಿಕೆಯಿಂದ ನಡೆದುಕೊಳ್ಳುವಂತೆ ಇವನೂ ತನ್ನ ನಡತೆಯ ವಿಷಯದಲ್ಲಿ ಎಚ್ಚರಿಕೆಯಿಂದಿರುವನು. ಇವನು ಏನನ್ನೂ ಅಪೇಕ್ಷಿಸನು. ತನ್ನ ಶಕ್ತಿಯಲ್ಲಿರುವ ವಿಷಯವನ್ನಲ್ಲದೆ, ಸ್ವಭಾವಕ್ಕೆ ವಿರೋಧವಾದ ವಿಷಯವನ್ನಲ್ಲದೆ ಇತರ ಯಾವುದನ್ನೂ ಬೇಡ

ವೆನ್ನುವುದಿಲ್ಲ. ಎಲ್ಲಾ ಸಂದರ್ಭದಲ್ಲಿಯೂ ತನ್ನ ಬುದ್ಧಿಯನ್ನು ಅಪ್ರಯಾಸವಾಗಿ ಉಪಯೋಗಿಸುವನು. ಜನರು ತನ್ನನ್ನು ಹೆಡ್ಡನೆಂದರೆ ಮೂಢನೆಂದರೆ ಅವನು ಲಕ್ಷ್ಯಮಾಡನು. ಮುಖ್ಯವಾಗಿ ತನ್ನ ಶತ್ರು ತಾನೇ ಎಂಬ ಭಾವನೆಯಿಂದ ತನ್ನ ನಡತೆಯನ್ನು ಎಚ್ಚರಿಕೆಯಿಂದ ನೋಡಿಕೊಳ್ಳುವನು."

೩

ಈ ಉಪನ್ಯಾಸದಲ್ಲಿ ಉದ್ಧರಿಸಿರುವ ಮಾತುಗಳಂತೆ ಎಪಿಕ್ಟಿಟಸ್ ಗುರುವಿನ ಬೇರೆ ಮಾತು ಬಹಳ ಇದೆ. ಆದರೆ ಇಷ್ಟರಿಂದಲೇ ಅವನ ಉಪದೇಶದ ರೀತಿಯನ್ನು ಗ್ರಹಿಸಬಹುದಾಗಿದೆ. ಇದನ್ನು ಓದುವವರು ಬೇಸರಗೊಳ್ಳಲಾರರು ಎಂದು ನನ್ನ ನಂಬಿಕೆ. ನಾನು ಕೆಲವು ವರ್ಷಗಳ ಹಿಂದೆ ಈತನ ಉಪದೇಶವನ್ನು ಇಂಗ್ಲಿಷ್ ಭಾಷಾಂತರದಲ್ಲಿ ಓದಿದಾಗ ಈ ಮಾತುಗಳನ್ನು ಆಶ್ಚರ್ಯದಿಂದ ಆನಂದದಿಂದ ಮರಳಿ ಮರಳಿ ಓದಿದೆನು. ಇದು ಹೊಸ ಮಾತು ಎಂದು ಹೇಳುವಂತೆ ಇಲ್ಲ. ಇದೇ ಅರ್ಥದ ಮಾತುಗಳು ಭಗವದ್ಗೀತೆಯಲ್ಲಿ, ಅನುಭವಾಮೃತದಲ್ಲಿ, ಇತರ ನಮ್ಮ ಸೀಮೆಯ ಗ್ರಂಥಗಳಲ್ಲಿ ಇವೆ. ಎಲ್ಲವೂ ಎಲ್ಲರಿಗೂ ತಿಳಿದ ಮಾತೇ. ಹಳೆಯ ಮಾತು ಆದರೂ ಇವು ಬೆಲೆಯ ಮಾತು; ಹಳೆಯ ಆಣಿಮುತ್ತು, ಜೀವರತ್ನ. ಓದುವಂದು ಯಾರಿಗಾದರೂ ಬೇಸರವಾಗುವುದಾದರೆ ಇವನ್ನು ಒಟ್ಟಿಗೆ ಓದುವುದಕ್ಕೆ ಪ್ರತಿಯಾಗಿ ಆಗಾಗ ಒಂದೊಂದು ಮಾತನ್ನಾದರೂ ನೋಡಬೇಕು. ಏಕೆಂದರೆ ಇವನ್ನು ಬಿಟ್ಟು ಯಾವ ಬಾಳೂ ಉದ್ಧಾರವಾಗುವಂತಿಲ್ಲ. ಅಲ್ಲದೆ ಇಲ್ಲಿ ಓದುವುದಷ್ಟೇ ಮುಖ್ಯವಲ್ಲ. ಓದಿದ್ದನ್ನು ಮನಸ್ಸಿನಲ್ಲಿ ತಿರುವಿಹಾಕಬೇಕು. ಅದನ್ನು ಜೀವನದಲ್ಲಿ ಅನುಷ್ಠಾನ ಮಾಡಬೇಕು. ಸ್ವಲ್ಪ ಸಾವಧಾನವಾಗಿ ಓದುವುದು ಹೀಗೆ ಮಾಡುವುದಕ್ಕೆ ಅನುಕೂಲವೆಂದೇ ಹೇಳಬೇಕು.

ಬೇಸರಪಡದೆ ನೋಡುವವರಿಗೆ ಈ ಮಾತುಗಳಲ್ಲಿ ಹಳೆಯದೆನ್ನಬಹುದಾದ ವಿಷಯವು ಹೊಸ ರೀತಿಯಲ್ಲಿ ಪ್ರಕಾಶವಾಯಿತೆಂದು ಕಾಣುವುದು. ಆ ಹೊಸ ರೀತಿ ಎಪಿಕ್ಟಿಟಸ್ ಗುರುವಿನ ವ್ಯಕ್ತಿ ಸ್ವರೂಪ. ಈತನು ಈ ವಿಷಯಗಳನ್ನು ಉಪನ್ಯಾಸ ರೂಪದಲ್ಲಿ ಹೇಳುತ್ತಿರಲಿಲ್ಲ. ಬಂದು

ಕುಳಿತು ಆ ಸಮಯಕ್ಕೆ ತನಗೆ ತೋರಿದ ಅಥವಾ ಯಾರಾದರೂ ಕೇಳಿದ ಮಾತನ್ನು ಕುರಿತು ಮಾತನಾಡುತ್ತಿದ್ದನೆಂದು ತೋರುತ್ತದೆ. ಸಭೆಗೆ ಒಂದು ಸಲ ಯಾರೋ ತರುಣನು ಸೊಗಸುಮಾಡಿಕೊಂಡು ಬಂದಿರಬೇಕು. ಮನುಷ್ಯನಿಗೆ ನಿಜವಾದ ಚೆಲುವು ಎನ್ನುವುದು ಯಾವುದು ಎಂದು ವಿವರಿಸುತ್ತಾನೆ. ಒಬ್ಬನು ಯಾರೋ ಸತ್ತನೆಂದು ದುಃಖದಲ್ಲಿ ಬರುತ್ತಾನೆ. ಆಗ ಇವನು ಸಾವನ್ನು ಕುರಿತು ದುಃಖಿಸುವುದು ಹೆಡ್ಡತನವೆನ್ನುತ್ತಾನೆ; ವಿಷಯವನ್ನು ವಿವರಿಸುತ್ತಾನೆ. ಇಸ್ನೊಮ್ಮೆ ಅಧಿಕಾರಿಯೊಬ್ಬನು ಹೆಮ್ಮೆಯಿಂದ ನನಗೆ ಆಗಬೇಕಾದದ್ದೇನಿದೆ, ಆದರೂ ಇವನು ಶಕ್ತನೆಂದು ಬಹಳ ಹೇಳುತ್ತಾರಲ್ಲ, ಏನು ಉಪದೇಶಿಸುತ್ತಾನೆ, ನೋಡೋಣ ಎಂದು ಬರುತ್ತಾನೆ. ಆಗ ಗುರು ಅವನನ್ನೇ ವಿಷಯವಾಗಿ ತೆಗೆದುಕೊಂಡು ಮಾತನಾಡುತ್ತಾನೆ. ಆದ್ದರಿಂದ ಈತನ ಉಪದೇಶ ಆಗ ಜನರಿಗೆ ಕಂಡ ಅಥವಾ ತೋರಿದ ವಿಷಯವನ್ನು ಕುರಿತದ್ದಾಗಿರುತ್ತಿತ್ತು. ಆದ್ದರಿಂದ ಸ್ವಾರಸ್ಯವಾಗಿರುತ್ತಿತ್ತು; ಅಪ್ರಕೃತವೆಂದು ತೋರಿರಲಾರದು. ಇದು ಯಾವುದೂ ಚರ್ಚೆಯ ಸಲುವಾಗಿ ಮಾಡಿದ ಚರ್ಚೆಯಲ್ಲ. ಒಂದೊಂದು ಸಂದರ್ಭದಲ್ಲಿ ಏನು ಮಾಡಬೇಕು, ಹೇಗೆ ನಡೆದುಕೊಳ್ಳಬೇಕು ಎಂದು ಕೇಳುವವನಿಗೆ ದಾರಿ ತೋರಿಸುವ ಮಾತಾಗಿತ್ತು. ತತ್ತ್ವವೆನ್ನುವುದು ಜ್ಞಾನವಲ್ಲ ಅನುಷ್ಠಾನ ಎನ್ನುವುದು ಇವನ ಮಾತಿನಲ್ಲೆಲ್ಲ ವ್ಯಕ್ತವಾಗುವ ಮುಖ್ಯ ತತ್ತ್ವ.

ಪ್ರಾಸಂಗಿಕವಾಗಿಯೂ ಸ್ವಾರಸ್ಯವಾಗಿಯೂ ಇರುವ ಈ ಮಾತು ಧೀರವಾಗಿಯೂ ಇದೆ. ಜನರ ಮನಸ್ಸನ್ನು ತಿಳಿದು ದೊಡ್ಡವರ ಮುಖ ನೋಡಿ ರಂಜನೆಗಾಗಿ ಆಡಿದ ಮಾತು ಇಲ್ಲಿ ಇಲ್ಲ. ಕೇಳಿದವರಿಗೆ ಒಳ್ಳೆಯದಾಗಬೇಕೆನ್ನುವುದು ಇದರ ಉದ್ದೇಶ. ಆದ್ದರಿಂದ ಆಗಾಗ ಸ್ವಲ್ಪ ಕಠಿನವಾಗಿಯೇ ಇದೆ. ಈ ಒಳ್ಳೆಯದೆನ್ನುವುದು ವಾಡಿಕೆಯ ಒಳ್ಳೆಯದಲ್ಲ; ತತ್ತ್ವಜ್ಞಾನ ಒಳ್ಳೆಯದು. ಆದಕಾರಣ ಇದನ್ನು ಸಾಧಿಸುವವನಿಗೆ ಧೃತಿಯಿರಬೇಕು. ಇದನ್ನು ಹೇಳುವವನಾಗಲಿ ಕೇಳುವವನಾಗಲಿ ಅಂಜುಬುರುಕನಾದರೆ ಉಪಯೋಗವಿಲ್ಲ. ಚಕ್ರವರ್ತಿಯಿರುವ ರಾಜ್ಯದಲ್ಲಿ ಶ್ರೇಷ್ಠರು ಸಾಮಾನ್ಯರು ಎಂದು ಜನಾಂಗವೇ ಎರಡು ಪಂಗಡವಾಗಿದ್ದ ಜನದ

ಮಧ್ಯೆ, ಬಿಡುಗಡೆ ಹೊಂದಿದ ದಾಸನಾದ ಈತನು ಚಕ್ರವರ್ತಿ ಎಂದರೆ ಶ್ರೇಷ್ಠನೆಂದರೆ ಅಂಜದೆ ಮಾತಾಡುತ್ತಿದ್ದನು. ಆಡಳಿತವು ಇವನನ್ನು ಗಡೀಪಾರು ಮಾಡಿತು. ಇವನು ಅದಕ್ಕೆ ಚಿಂತಿಸಲಿಲ್ಲ. 'ಚಕ್ರವರ್ತಿ ಕೊಡುವ ಶಾಂತಿ ಹೊರಗಣ ಶಾಂತಿ, ದೇವರು ಕೊಡುವುದು ಒಳಗಣ ಶಾಂತಿ' ಎಂದು ಉಪದೇಶಿಸಿದನು. 'ಚಕ್ರವರ್ತಿ ನನಗೇನು ಮಾಡಬಲ್ಲನು? ಅವನು ಏನು ಕೇಡು ಮಾಡಿದರೂ ನನ್ನ ದೇಹಕ್ಕೆ ಮಾಡಬಲ್ಲನು. ನನ್ನ ಆತ್ಮ ನನ್ನ ದೇಹ ಅದನ್ನು ಏನೂ ಮಾಡುವಂತಿಲ್ಲ' ಎಂದನು. 'ನೀನು ದೊಡ್ಡವರೆದುರಿಗೆ ಮಾತನಾಡುವಾಗ ಎಲ್ಲರಿಗಿಂತಲೂ ದೊಡ್ಡವನಾದ ದೇವರೂ ಅಲ್ಲಿದ್ದಾನೆ ಎನ್ನುವುದನ್ನು ನೆನೆದು ನಡೆದುಕೊ' ಎಂದನು. ಈ ಮಾತುಗಳನ್ನಾಡುವಾಗ ತಾನು ಅದನ್ನು ಮರೆಯದೆ ನಡೆದುಕೊಂಡನು. ಧೀರನೂ ಪ್ರಾಜ್ಞನೂ ಆದ ಈತನು ಇದೇ ಮಾತುಗಳಲ್ಲಿ ಚಕ್ರವರ್ತಿಗೆ ತೋರಿದ ಮರ್ಯಾದೆಯನ್ನು ತನಗೆ ಹಿರಿಯನಾದ ಸಾಕ್ರಟೀಸನನ್ನು ಕುರಿತ ಮಾತಿನಲ್ಲಿ ತೋರಿಸಿದನು. ಎಪಿಕ್ಟೆಟಸನನ್ನು ರೋಮ್ ನಗರವೇ ಗುರುವೆಂದು ಒಪ್ಪಿತು. ಇವನ ಉಪದೇಶವನ್ನು ನೆನೆದು ಆಮೇಲೆ ಬಂದ ಒಬ್ಬ ಚಕ್ರವರ್ತಿ ಈತನನ್ನು ಗೌರವಿಸಿ ಗುರುವೆಂದನು.

ನಖರಾಯಪಟ್ಟಣದ ಬಳಿ ಅಯ್ಯನ ಕೆರೆಯ ವಿಷಯ ಒಂದು ಕತೆ ಹೇಳುತ್ತಾರೆ. ಹಿಂದೆ ಒಂದು ಸಲ ಈ ಕೆರೆ ತುಂಬಿ ಕಟ್ಟೆ ಒಡೆಯಬಹುದೆಂದು ಕಂಡಾಗ ಅಲ್ಲಿಯ ಕಾವಲುಗಾರನು ಸಹಾಯವನ್ನು ಕರೆತರಲು ತಮ್ಮನನ್ನು ಊರಿಗೆ ಕಳುಹಿಸಿ ತಾನು ಅಲ್ಲೇ ನಿಂತನಂತೆ. ಸಹಾಯ ಬರುವುದು ಸಾವಕಾಶವಾಗಲು ಅವನು ತಮ್ಮನನ್ನು ಕೂಗಿ ಕರೆಯುತ್ತಾ ಪ್ರವಾಹದಲ್ಲಿ ವೋಳೆಯನ್ನು ತಡೆದು ಜೀವವನ್ನು ಕಳೆದುಕೊಂಡನಂತೆ. ಈಗಲೂ ಕೆರೆ ತುಂಬಿದಾಗ ಅವನ ಆತ್ಮ ಊರ ಜನವನ್ನು ಕೂಗುತ್ತದೆಯೆಂದು ಜನರಲ್ಲಿ ಪ್ರತೀತಿ. ಮಾನವ ವರ್ಗವು ಶೇಖರಿಸಿರುವ ಧರ್ಮಾಮೃತದ ಕೆರೆಯ ಕಾವಲುಗಾರನು ಅದರ ಬಳಿ ನಿಂತು ಅದು ಹೋಗದಂತೆ ನೋಡಿಕೊಳ್ಳಿ ಎಂದು ಜನರಿಗೆ ಕೂಗಿ ಹೇಳುತ್ತಲೇ ಇರುತ್ತಾನೆ. ಸಾಕ್ರಟೀಸನ ಬಾಯಲ್ಲಿ ಬಂದದ್ದು ಆ ಕೂಗು. ಅದೇ ಕೂಗು ಎಪಿಕ್ಟೆಟಸನ ಬಾಯಲ್ಲಿ ಬಂದದ್ದು. ಇನ್ನೆಲ್ಲ ದೇಶಗಳ ಇನ್ನೆಲ್ಲ ಸಂಸ್ಕೃತಿಗಳ ಗುರುವರ್ಗದ

ಬಾಯಿಂದ ಕೇಳಬರುವುದೂ ಇದೇ ಕೂಗು. ಆ ಕೂಗಿಗೆ ತಮ್ಮ ಧ್ವನಿಯನ್ನು ಕೊಡುವುದರಿಂದಲೇ ಈ ಮಾನವರ ವಾಣಿಯು ದಿವ್ಯವಾಣಿಯಾಗುತ್ತದೆ. ನಶ್ವರವಾದ ಬಾಳುವೆಯೆಲ್ಲ ಹೋಗಲಾಗಿ ಇವರ ಮಾತು ಅಕ್ಷರವಾಗಿ ನಿಲ್ಲುತ್ತವೆ. ಗ್ರೀಕರ ರಾಷ್ಟ್ರಗಳು ಹೋದವು; ಅವುಗಳ ವೈಭವವೇ ಮರೆಯಿತು; ಸಾಕ್ರಟೀಸನ ನೆನಪು ಭದ್ರವಾಗಿ ನಿಂತಿದೆ. ರೋಮ್ ಚಕ್ರಾಧಿಪತ್ಯ ಹೋಯಿತು; ಅದರ ವಿಕ್ರಮ ಮರೆಯಿತು; ಎಪಿಕ್ಟಿಟಸನ ಮಾತು ಮಂಗಳವಾಗಿ ಮೊಳಗುತ್ತಿದೆ. ಎಲ್ಲವನ್ನೂ ಕೊಚ್ಚಿಕೊಂಡು ಹೋಗುವ ಕಾಲವಾಹಿನಿಯು ಈ ಪ್ರಭೃತಿಗಳ ಬಳಿ ಬಂದಾಗ ಗಿರಿಗಳ ಬಳಿ ಹರಿದುಬಂದ ನದಿಯಂತೆ ಅವರ ಪಾದಗಳನ್ನು ಮುಟ್ಟಿ ಪೂಜೆ ಮಾಡಿ ಮುಂದಕ್ಕೆ ಹೋಗುತ್ತದೆ; ಅದರ ಪ್ರವಾಹದ ಸೊಗಸು ಇವರ ಮೇಲ್ಮೆಗೆ ಎರವಲಾಗುತ್ತದೆ. ಮಾನವನ ಚರಿತ್ರೆಯಲ್ಲಿ ಉಳಿಯಬೇಕಾದದ್ದು ಇಷ್ಟೇ ಎಂದು ಇದರಿಂದ ತೋರುವುದು. ಆ ಚರಿತ್ರೆಯು ಸತ್ಯದ ಸೌಧವನ್ನು ಕಟ್ಟುತ್ತಿದೆ. ಸತ್ಯವೆಂಬ ಈ ತತ್ತ್ವ ಒಂದೇ. ನಿತ್ಯವಾದ ಏಕವಾದ ಈ ತತ್ತ್ವದ ಪೂಜೆ ಒಂದು ದೇಶದಲ್ಲಿಯ ಕಹಳೆ, ಒಂದು ದೇಶದಲ್ಲಿಯ ಭೇರಿ, ಒಂದು ದೇಶದಲ್ಲಿಯ ಮಂತ್ರ, ಒಂದು ದೇಶದಲ್ಲಿಯ ಕಲಾಪ —ಇವುಗಳಿಂದ ಅನಂತವಾದ ಕಾಲದಲ್ಲಿ ವಿಶಾಲವಾದ ಸೃಷ್ಟಿಯಲ್ಲಿ ನಡೆಯುತ್ತಾ ಇದೆ. ಆ ಕಹಳೆ ಭೇರಿ ಮಂತ್ರ ಕಲಾಪವನ್ನು ನಾವು ಸಹೃದಯರಾಗಿ ಕೇಳಬೇಕು; ನೋಡಬೇಕು. ಹೀಗೆ ನೋಡಿದವರಿಗೆ ಎಲ್ಲ ಕಡೆಯ ಭಕ್ತರೂ ಒಂದೇ ಕೆಲಸದಲ್ಲಿ ತೊಡಗಿದ್ದಾರೆ ಎಂದು ತಿಳಿಯುವುದು.

———

# ಮಾರ್ಕಸ್ ಆರೀಲಿಯಸ್ ಚಕ್ರವರ್ತಿಯ ಆಲೋಚನೆ

೧

ಮಾರ್ಕಸ್ ಆರೀಲಿಯಸ್ ಚಕ್ರವರ್ತಿ ಪಾಶ್ಚಾತ್ಯ ಸಂಸ್ಕೃತಿಯ ಜನಕ ಮಹಾರಾಜನು. ಸಂಸಾರದಲ್ಲಿರುತ್ತಾ ಯೋಗದಲ್ಲಿ ಸಿದ್ಧಿಹೊಂದುವುದೆನ್ನುವುದು ಆರ್ಯರಲ್ಲಿ ಜನಕನ ಪಾಲಿಗೆ ಬಂದಹಾಗೆ ಪಾಶ್ಚಾತ್ಯರಲ್ಲಿ ಇವನ ಪಾಲಿಗೂ ಬಂದಿತು. ಈ ಉಪನ್ಯಾಸದಲ್ಲಿ ಈತನ ವಿಷಯವನ್ನು ಸ್ವಲ್ಪ ಮಟ್ಟಿಗೆ ತಿಳಿಸಲು ಯತ್ನಮಾಡಿದೆ.

ಈತನು ರೋಮ್ ನಗರದ ಸರದಾರ ಮನೆತನಗಳಲ್ಲಿ ಒಂದಾದ ವೆರಸ್ ಮನೆತನದಲ್ಲಿ ಹುಟ್ಟಿದನು. ಇವನ ತಾತ ಆಂಟೋನಿನಸ್ ಚಕ್ರವರ್ತಿ. ಇವನ ತಂದೆ ಚಿಕ್ಕಂದಿನಲ್ಲಿ ತೀರಿಹೋದನು. ಚಕ್ರವರ್ತಿ ಇವನ ಗುಣಗಳನ್ನು ನೋಡಿ ಚಿಕ್ಕಂದಿನಲ್ಲೇ ಇವನನ್ನು ದತ್ತು ತೆಗೆದುಕೊಂಡನು; ಇವನಿಗೆ ಸರಿಯಾದ ವಿದ್ಯಾಭ್ಯಾಸವನ್ನು ಮಾಡಿಸಿದನು. ಬಾಲ್ಯದಲ್ಲಿಯೇ ಇವನಿಗೆ ತತ್ತ್ವಜ್ಞಾನದ ಕಡೆಗೆ ಮನಸ್ಸು ಹೋಯಿತೆಂದು ಕಾಣುತ್ತದೆ. ಆಗಿನ ಕಾಲಕ್ಕೆ ರೋಮಿನಲ್ಲಿ ಸ್ಟೋಯಿಕ್ ತತ್ತ್ವಜ್ಞರು ಪ್ರಸಿದ್ಧರಾಗಿದ್ದರು. ಎಪಿಕ್ಟಿಟಸ್ ಇದೇ ಪಂಗಡದವನು. ಮಾರ್ಕಸನು ಇವರ ಉಪದೇಶಗಳನ್ನು ಒಪ್ಪಿಕೊಂಡನು. ದೇಹವನ್ನು ದಂಡನೆಯಲ್ಲಿ ಇಟ್ಟುಕೊಳ್ಳುವುದು ಇವರ ಉಪದೇಶದಲ್ಲಿ ಒಂದು ಮುಖ್ಯಾಂಶ. ಮಾರ್ಕಸನು ಇದರಂತೆ ನಡೆಯುವ ಯತ್ನದಲ್ಲಿ ಕಾಯಿಲೆ ಕೂಡ ಬಿದ್ದನಂತೆ. ಎಂದರೆ ಉಪದೇಶ ಯಾವುದೂ ಇವನಿಗೆ ಬರಿಯ ತಿಳುವಳಿಕೆಯ ವಿಷಯವಾಗಿರಲಿಲ್ಲ; ತಿಳಿದ ಮೇಲೆ ನಡೆಸಬೇಕಾದ ವಿಷಯವಾಗಿತ್ತು. ಇವನ ಬುದ್ಧಿಶಕ್ತಿ ಭಕ್ತಿ ಇವೂ ಚಿಕ್ಕಂದಿನಲ್ಲಿಯೇ ವ್ಯಕ್ತವಾದುವು. ಎಳೆಂಟು ವರ್ಷದ ಹುಡುಗನಾಗಿದ್ದಾಗ ಇವನನ್ನು ಇವರ ಮನೆತನಗಳ ವಾಡಿಕೆಯಂತೆ ಒಂದು ದೇವಾಲಯದ ಆಗಮದಲ್ಲಿ ಸೇರಿಸಿದರು. ಇದು ನಮ್ಮಲ್ಲಿ ಉಪನಯನ ಎನ್ನುವಂತೆ ಒಂದು

ಸಂಸ್ಕಾರವಾಗಿತ್ತೆಂದು ಕಾಣುತ್ತದೆ. ಪುಣ್ಯವಂತರ ಮನೆಯವರು ಸಂಧ್ಯಾವಂದನೆ ಮಾಡಬೇಕಾದದ್ದಿಲ್ಲ ಎನ್ನುವಂತೆ ಇವರಲ್ಲಿ ಇದನ್ನು ಅಷ್ಟು ಲೆಕ್ಕವಾಗಿ ಇಟ್ಟುಕೊಳ್ಳುತ್ತಿರಲಿಲ್ಲವೆಂದು ತೋರುತ್ತದೆ. ಆದರೂ ಎಂಟುವರ್ಷದ ಬಾಲಕನು ಆಗಮದ ವಿಷಯ ಎಲ್ಲವನ್ನೂ ನೋಡಿ ತಿಳಿದುಕೊಂಡನು; ಕೆಲವು ಕಾಲದ ಮೇಲೆ ಅದರ ಮಂತ್ರಗಳನ್ನು ಬಾಯಲ್ಲಿ ಹೇಳುವಂತೆ ತನ್ನ ಕೆಲಸಗಳನ್ನು ಕಲಿತನು. ಪ್ರಾಪ್ತವಯಸ್ಕನಾದಾಗ ಇವನಿಗೆ ಮದುವೆ ಮಾಡಿದರು. ಚಕ್ರವರ್ತಿಯು ತನ್ನ ಕೆಲಸದಲ್ಲಿ ಇವನನ್ನು ಸೇರಿಸಿಕೊಂಡು ಇವನಿಗೆ ಕೆಲಸ ತಿಳಿಯುವಂತೆ ಮಾಡಿದನು. ಆತನು ವೀರಸ್ ಎಂಬ ಇನ್ನೊಬ್ಬನನ್ನು ದತ್ತುಮಾಡಿಕೊಂಡು ಸಾಕಿದ್ದನು. ಇವರಲ್ಲಿ ಇದು ವಾಡಿಕೆಯಾಗಿತ್ತು. ತೀರಿಹೋಗುವಾಗ್ಯೆ ಚಕ್ರವರ್ತಿಯು ಮಾರ್ಕಸನು ತನ್ನ ಉತ್ತರಾಧಿಕಾರಿಯಾಗುವುದು ತನ್ನ ಇಷ್ಟವೆಂದು ತಿಳಿಸಿ ಹೋದನು. ಮಾರ್ಕಸ್ ಚಕ್ರವರ್ತಿಯಾಗುವುದು ಜನರಿಗೂ ಇಷ್ಟ. ಆದರೂ ಮಾರ್ಕಸನು ತನ್ನ ಜೊತೆಗೆ ವೀರಸನನ್ನು ಸೇರಿಸಿಕೊಂಡು ಚಕ್ರವರ್ತಿಯ ಕಾರ್ಯದಲ್ಲಿ ಅರ್ಧವನ್ನು ತಾನೂ, ಇನ್ನರ್ಧವನ್ನು ಅವನೂ ಮಾಡುವಂತೆ ಏರ್ಪಾಡು ಮಾಡಿದನು. ಇದರಿಂದ ಇವನ ಔದಾರ್ಯ ಎಂಥದೆಂದು ಸ್ಪಷ್ಟವಾಗಬೇಕು. ರಾಜ್ಯದ ಕೆಲಸದಲ್ಲಿ ತನ್ನದೆಂದ ಎಲ್ಲವನ್ನೂ ಈತನು ಸಾವಧಾನವಾಗಿ ಸಮಾಧಾನವಾಗಿ ಕುಂದು ಕೊರತೆ ಇಲ್ಲದೆ ಚೆನ್ನಾಗಿ ಮಾಡುತ್ತಿದ್ದನು. ಯುದ್ಧಗಳು ಬಂದವು. ಸೇನಾಧಿಪತಿಗಳು ಹೋಗಿ ಜಯಿಸದೆ ಇರಲು ತಾನೇ ಸೇನೆಯೊಡನೆ ಹೋಗಿ ಶತ್ರುಗಳನ್ನು ಗೆದ್ದನು. ಒಂದುಸಲ ಸೇನೆ ನೀರಿಲ್ಲದೆ ಬಹಳ ಕಷ್ಟದಲ್ಲಿದ್ದಾಗ ಇವನು ಪ್ರಾರ್ಥನೆ ಮಾಡಿದನಂತೆ; ಸಮಯಕ್ಕೆ ಸರಿಯಾಗಿ ಮಳೆ ಬಂದು ಕಷ್ಟಪರಿಹಾರವಾಯಿತು. ಇದನ್ನು ಜನರು ಇವನ ಪುಣ್ಯಫಲವೆಂದು ಬಗೆದರು. ಮಂಡಲೇಶ್ವರನೊಬ್ಬನು ದ್ರೋಹವನ್ನು ಮಾಡಿದನು. ಚಕ್ರವರ್ತಿ ಅವನ ಮೇಲೆ ಸೈನ್ಯವನ್ನು ಕಳುಹಿಸಿದನು. ದ್ರೋಹಿ ಸೆರೆಸಿಕ್ಕಲು ಚಕ್ರವರ್ತಿಯು ಅವನನ್ನು ಮನ್ನಿಸಿದ್ದಲ್ಲದೆ ಅವನ ನೆಂಟರಿಷ್ಟರಿಗೆ ಒಂದೂ ತೊಂದರೆ ಮಾಡದೆ ನೋಡಿಕೊಂಡನು. ಮರಳಿ ಒಂದುಸಲ ಯುದ್ಧಕ್ಕೆ ಹೋಗಿದ್ದಾಗ ಒಂದು ರೀತಿಯ ಜ್ವರ ಬಂದು ಈತನು ಪಾಳೆಯದಲ್ಲಿ ತೀರಿಹೋದನು. ಚಕ್ರವರ್ತಿ

ಆರೀಲಿಯಸನು ರೋಮ್ ನಗರವನ್ನೂ ರಾಷ್ಟ್ರವನ್ನೂ ನೋಡಿಕೊಂಡ ರೀತಿಯಲ್ಲಿ ಅವನು ಒಂದೊಂದು ಮನೆಗೂ ಹಿರಿಯನೆಂಬಂತೆ ಆಗಿತ್ತು. ರೋಮ್ ನಗರದ ಜನರು ಬಹಳ ಹಿರಿಯ ಚೇತನಗಳ ವಿಷಯದಲ್ಲಿ ವಾಡಿಕೆಯಿದ್ದಂತೆ ಇವನನ್ನು ದೇವರೆಂದು ಪ್ರತಿಷ್ಠೆಮಾಡಿದರು. ಇದು ಅಲ್ಲಿ ಕೃತತ್ರೇತಾಯುಗಗಳಲ್ಲಿ ಇದ್ದಂಥ ವಾಡಿಕೆಯೆಂದು ಕಾಣುತ್ತದೆ. ಈತನು ರಾಷ್ಟ್ರದ ಕಾರ್ಯದಲ್ಲಿ ಯುದ್ಧದ ಪಾಳೆಯದಲ್ಲಿ ಬಿಡುವಾದಾಗ ನಾಲ್ಕುನಾಲ್ಕು ಮಾತನ್ನು ಬರೆದಿಡುತ್ತಿದ್ದನು. ಹಾಗೆಯೇ ತನ್ನ ಜೀವನ ಚರಿತೆಯೊಂದನ್ನು ಬರೆದನಂತೆ. ಈ ಚರಿತೆಯೆನ್ನುವುದು ಈಗ ಸಿಕ್ಕುವಂತಿಲ್ಲ; ಆದರೆ ಆ ದಿನಚರಿಯು ನಮ್ಮ ಕಾಲದವರೆಗೆ ಉಳಿದುಬಂದಿದೆ. ಆಲೋಚನೆಗಳು ಎಂಬ ಈ ಪುಸ್ತಕದಿಂದ ಕೆಲವು ಭಾಗವನ್ನು ಕೆಳಗೆ ಕೊಟ್ಟಿದೆ. ಇದರಿಂದ ಈತನ ಸ್ವಭಾವವೆಂಥದ್ದಾಗಿತ್ತು ಈತನು ಏನು ಯೋಚನೆಮಾಡುತ್ತಿದ್ದನು ಎಂದು ಸ್ಪಷ್ಟವಾಗುತ್ತದೆ.

೨

ಮಾರ್ಕಸ್ ಆರೀಲಿಯಸನು ತಾನು ಯಾರು ಯಾರಿಂದ ಏನೇನನ್ನು ಕಲಿತನೆಂಬುದನ್ನು ಈ ಮಾತುಗಳಲ್ಲಿ ಹೇಳಿದಾನೆ.

"ನಮ್ಮ ತಾತನವರಿಂದ ನಾನು ನೀತಿಯನ್ನೂ, ಕೋಪವನ್ನು ತಡೆಯುವುದನ್ನೂ ಕಲಿತೆನು. ನಮ್ಮ ತಂದೆಯವರ ಹೆಸರಿನಿಂದಲೂ ಜ್ಞಾಪಕದಿಂದಲೂ ವಿನಯವನ್ನೂ ದೃಢಶೀಲತೆಯನ್ನೂ ಕಲಿತೆನು. ನಮ್ಮ ತಾಯಿಯವರಿಂದ ದೈವಭಕ್ತಿ ದಾನಶೀಲತೆಯನ್ನೂ ದುಷ್ಟವಾದ ಕಾರ್ಯಕ್ಕೆ ಮಾತ್ರವಲ್ಲದೆ ದುಷ್ಟವಾದ ಭಾವಕ್ಕೂ ಎಡೆಗೊಡದೆ ಇರುವುದನ್ನೂ ಮತ್ತು ಐಶ್ವರ್ಯವಂತರ ಪದ್ಧತಿಯನ್ನು ಬಿಟ್ಟು ಸುಲಭವಾಗಿ ಸಾಮಾನ್ಯವಾಗಿ ಜೀವಿಸುವುದನ್ನೂ ಕಲಿತೆನು. ಡಯೋಕ್ರೀಟಸರಿಂದ ಅಲ್ಪ ವಿಷಯಗಳಲ್ಲಿ ಕಾಲಹರಣಮಾಡದಂತೆ ಇರುವುದನ್ನೂ, ಮಂತ್ರವಾದಿ ತಂತ್ರವಾದಿಗಳ ಮಂತ್ರ ಮಾಯಗಳನ್ನು ಮತ್ತು ಭೂತ ಪ್ರೇತಗಳನ್ನು ಓಡಿಸುವೆವೆಂದು ಹೇಳುವ ಮಾತುಗಳನ್ನು ನಂಬದಿರುವುದನ್ನೂ ಕಲಿತೆನು. ಅಪೊಲೋನಿಯಸರಿಂದ ಬುದ್ಧಿಯ ಸ್ವಾತಂತ್ರ್ಯವನ್ನೂ, ದೃಢವಾದ

ನಿಶ್ಚಯೋದ್ದೇಶವನ್ನೂ, ಕ್ಷಣಮಾತ್ರವಾದರೂ ಬುದ್ಧಿಯ ಹೊರತು ಮತ್ತೆ ಯಾವುದಕ್ಕೂ ಎಡೆಗೊಡದೆ ಇರುವುದನ್ನೂ, ಯಾವಾಗಲೂ ಒಂದೇ ರೀತಿ ಸಮಾಧಾನವಾಗಿರುವುದನ್ನೂ ಎಂದರೆ ಬಾಧೆಯುಂಟಾದಾಗ ಮಗು ತೀರಿ ಹೋದಾಗ ದೀರ್ಘಕಾಲದ ರೋಗವುಂಟಾದಾಗ ಒಂದೇ ರೀತಿಯಾಗಿರುವುದನ್ನೂ ಕಲಿತೆನು. ನಮ್ಮ ಸಹೋದರರಾದ ಸರ್ಜರಸರಿಂದ ನೆಂಟರ ಪ್ರೇಮವನ್ನೂ ಸತ್ಯದಲ್ಲಿ ಧರ್ಮದಲ್ಲಿ ಪ್ರೇಮವನ್ನೂ ಕಲಿತೆನು. ಸರ್ವರಿಗೂ ಒಂದೇ ನ್ಯಾಯವಿರುವ ರಾಜನೀತಿ ಎಂದರೆ ಎಲ್ಲರಿಗೂ ಸಮಾನವಾದ ಅಧಿಕಾರ ಸ್ವಾತಂತ್ರ್ಯ ಇರುವ ರಾಜ್ಯಾಂಗದ ಭಾವನೆಯನ್ನು ಮತ್ತು ಪ್ರಜೆಗಳ ಸ್ವಾತಂತ್ರ್ಯವನ್ನು ಗೌರವಿಸಿ ನಡೆದುಕೊಳ್ಳುವ ರಾಜಶಾಸನದ ಭಾವನೆಯನ್ನು ಇವರಿಂದ ನಾನು ಪಡೆದೆನು. ಒಳ್ಳೆಯದನ್ನು ಮಾಡುವ ಮನಸ್ಸನ್ನೂ ಇತರರಿಗೆ ಧಾರಾಳವಾಗಿ ಏನನ್ನಾದರೂ ಕೊಡುವ ಬುದ್ಧಿಯನ್ನೂ ಒಳ್ಳೆಯದನ್ನು ನಿರೀಕ್ಷಿಸುತ್ತಾ ಸಂತೋಷವಾಗಿರುವುದನ್ನೂ ನನ್ನ ಮಿತ್ರರಿಗೆ ನನ್ನ ಮೇಲೆ ಪ್ರೀತಿ ಇದೆಯೆಂಬುದನ್ನು ನಂಬಿ ನಡೆಯುವುದನ್ನೂ ಕಲಿತೆನು. ಒಪ್ಪದವರ ವಿಷಯದಲ್ಲಿ ಇವರು ತಮ್ಮ ಅಭಿಪ್ರಾಯವನ್ನು ಗುಪ್ತವಾಗಿರಿಸುತ್ತಿರಲಿಲ್ಲ ಮತ್ತು ಈತನ ಇಷ್ಟವೇನು? ಇವನಿಗೆ ಯಾವುದು ಇಷ್ಟವಿಲ್ಲ? ಎಂಬುದು ಇವರ ಮಿತ್ರರಿಗೆ ಯಾವ ಸಂದೇಹವೂ ಇಲ್ಲದೆ ತಿಳಿದಿರುವುದು. ಇದನ್ನು ಈತನಲ್ಲಿ ನೋಡಿದೆನು. ನನಗೆ ಒಳ್ಳೆಯ ತಾತಂದಿರು, ಒಳ್ಳೆಯ ತಾಯಿತಂದೆಯವರು, ಒಳ್ಳೆಯ ಸೋದರಿ, ಒಳ್ಳೆಯ ಗುರುಗಳು, ಒಳ್ಳೆಯ ಸಹವಾಸಗಳು, ಒಳ್ಳೆಯ ನೆಂಟರು, ಒಳ್ಳೆಯ ಮಿತ್ರರು, ಪ್ರಾಯಶಃ ಎಲ್ಲದರಲ್ಲೂ ಒಳ್ಳೆಯದು ದೊರೆತದ್ದಕ್ಕಾಗಿ ಕೃತಜ್ಞನಾಗಿದೇನೆ. ನನ್ನಿಂದ ಡಂಭದ ಭಾವವನ್ನೆಲ್ಲ ಕಿತ್ತೆಸೆದು ಮನುಷ್ಯನು ಅರಮನೆಯಲ್ಲಿದ್ದರೂ ಪಹರೆಯವರಿಲ್ಲದೆ ಜರತಾರಿಯ ವಸ್ತ್ರಗಳಿಲ್ಲದೆ ಇತರ ಆಡಂಬರವಿಲ್ಲದೆ ಜೀವಿಸುವುದು ಸಾಧ್ಯವೆಂಬ ತಿಳುವಳಿಕೆಯನ್ನು ತರಬಲ್ಲ ತಂದೆಯನ್ನು ನನಗೆ ಕೊಟ್ಟುದಕ್ಕಾಗಿ ಕೃತಜ್ಞನಾಗಿದ್ದೇನೆ. ನನ್ನನ್ನು ಸಾಕಿದವರನ್ನು ಅವರ ಅಪೇಕ್ಷೆಯಂತೆ ಒಳ್ಳೆಯ ಸ್ಥಿತಿಯಲ್ಲಿ ಅವರು ಇನ್ನೂ ಪೂರ್ವವಯಸ್ಕರೆಂದು ಸಾವಕಾಶಮಾಡದೆ ಶೀಘ್ರದಲ್ಲಿ ಇರಿಸಿದುದಕ್ಕಾಗಿಯೂ, ಅನೇಕಸಲ ರಸ್ಟಿಕಸನೊಂದಿಗೆ ಅಸಮಾಧಾನವುಂಟಾದರೂ

ಪಶ್ಚಾತ್ತಾಪಪಡಬೇಕಾದ ಯಾವ ಕೃತ್ಯವನ್ನೂ ನಾನು ಮಾಡದೆ ಇದ್ದುದಕ್ಕಾಗಿಯೂ, ನಮ್ಮ ತಾಯಿ ಚಿಕ್ಕಂದಿನಲ್ಲೇ ಸಾಯುವುದು ದೇವರ ಇಚ್ಛೆಯಾದರೂ ಕಡೆಗಾಲದಲ್ಲಿ ಆಕೆ ನನ್ನ ಸಮೀಪದಲ್ಲಿ ಇದ್ದುದಕ್ಕಾಗಿಯೂ, ಯಾರಿಗಾದರೂ ನಾನು ಸಹಾಯ ಮಾಡಬೇಕೆಂದು ಅಪೇಕ್ಷಿಸಿದಾಗ ಅದಕ್ಕೆ ಅವಕಾಶವಿಲ್ಲವೆಂದು ನನಗೆ ಯಾರೂ ಹೇಳದೆ ಇದ್ದುದಕ್ಕಾಗಿಯೂ, ನಾನು ಮತ್ತೊಬ್ಬರಿಂದ ಏನನ್ನಾದರೂ ಬೇಡಬೇಕಾದ ಸಂದರ್ಭ ಒದಗದುದಕ್ಕಾಗಿಯೂ, ವಿನೀತಳೂ ಪ್ರೇಮಿಯೂ ಸರಳೆಯೂ ಆದ ಪತ್ನಿಯನ್ನು ನಾನು ಪಡೆದುದಕ್ಕಾಗಿಯೂ, ತತ್ತ್ವವಿಚಾರದ ಕಡೆಗೆ ನನ್ನ ಮನಸ್ಸು ಹೋಗಬೇಕಾದಾಗ ನಾನು ಕೇವಲ ವಾಚಾಳರ ಸಹವಾಸಕ್ಕೆ ಬೀಳದೆ ಇದ್ದುದಕ್ಕಾಗಿಯೂ, ನಾನು ದೇವಗಣಕ್ಕೆ ವಂದನೆಯನ್ನು ಅರ್ಪಿಸುತ್ತೇನೆ. ಈ ಸೌಭಾಗ್ಯವೆಲ್ಲಾ ಅವರ ಕೃಪೆಯಿಂದಲೇ ಬರತಕ್ಕದ್ದು."

ಜೀವನದ ಮುಖ್ಯ ಸೂತ್ರವನ್ನು ಅವನು ಈ ಮಾತುಗಳಲ್ಲಿ ಹೇಳಿದ್ದಾನೆ. ಬುದ್ಧಿ ನಡೆಸುವ ಜೀವನ ಸರಿಯಾದ ಜೀವನ; ಅಲ್ಲದುದು ಅಲ್ಲ.

"ನಾನು ಎನ್ನುವ ಇದು ಏನೇ ಆದರೂ ಇಷ್ಟು ದೇಹ ಇಷ್ಟು ಉಸಿರು; ಇವೆರಡರಲ್ಲಿ ಅಧಿಕಾರದಲ್ಲಿರುವ ಬುದ್ಧಿ. ಈ ಒಡನೆಯೇ ಸಾಯುವುದಾದರೆ ಹೇಗೋ ಹಾಗೆ ದೇಹವನ್ನು ತುಚ್ಛವಾಗಿ ಕಾಣಬೇಕು. ಅದು ರಕ್ತ ಅಸ್ಥಿ ಮಾಂಸ ನರ ನಾಳಗಳ ಒಂದು ಪಂಜರ. ಉಸಿರೂ ಅಷ್ಟೇ. ನೋಡು, ಗಾಳಿ ಒಂದು ಕ್ಷಣದಲ್ಲಿದ್ದಹಾಗೆ ಇನ್ನೊಂದು ಕ್ಷಣದಲ್ಲಿಲ್ಲ. ಕ್ಷಣ ಕ್ಷಣವೂ ಬಿಡುವುದು ಮತ್ತು ಸೆಳೆಯುವುದು. ಮೂರನೆಯದೆಂದರೆ, ಅಧಿಕಾರದ ಬುದ್ಧಿಯ ಭಾಗ.

"ನೀನು ಈ ಕ್ಷಣವೇ ದೇಹವನ್ನು ಬಿಡುವುದು ಸಂಭವವಾದದ್ದರಿಂದ ಒಂದೊಂದು ಯೋಚನೆ ಒಂದೊಂದು ಕಾರ್ಯವನ್ನೂ ನಿನ್ನ ಜೀವನದ ಕೊನೆಯ ಯೋಚನೆ ಕೊನೆಯ ಕಾರ್ಯವೆಂಬಂತೆ ಮಾಡು.

"ಇನ್ನೊಬ್ಬರ ಮನಸ್ಸಿನಲ್ಲಿ ಏನಿರುವುದೆಂದು ವಿಚಾರ ಮಾಡದ ಕಾರಣದಿಂದ ಯಾವನೇ ಆಗಲಿ ಅಸುಖಿಯಾದನೆಂಬುದು ಅಪೂರ್ವ. ತನ್ನ

ಮನೋಗತಿಯನ್ನು ನೋಡಿಕೊಳ್ಳದೆ ಇರುವವನು ಖಂಡಿತವಾಗಿಯೂ ಅಸುಖಿಯಾಗಬೇಕು.

"ನೀನು ಇನ್ನೂ ಮೂರು ಸಾವಿರ ವರ್ಷ ಬದುಕುವುದಾದರೂ ಮೂವತ್ತು ಸಾವಿರ ವರ್ಷ ಬದುಕುವುದಾದರೂ ಈಗ ಇರುವ ಬದುಕಲ್ಲದೆ ಇನ್ನಾವುದನ್ನೂ ಕಳೆದುಕೊಳ್ಳಲಾರೆಯೆಂದೂ, ಇದನ್ನಲ್ಲದೆ ಬೇರೊಂದನ್ನು ಬಾಳಲಾರೆಯೆಂದೂ ಜ್ಞಾಪಕದಲ್ಲಿಡು. ಮನುಷ್ಯನು ಹಿಂದಣ ಕಾಲವನ್ನು ಕಳೆದುಕೊಳ್ಳಲಾಗುವುದಿಲ್ಲ; ಮುಂದೆ ಬರುವುದನ್ನು ಕಳೆದುಕೊಳ್ಳಲಾಗುವುದಿಲ್ಲ. ಯಾವುದು ಅವನ ಅಧೀನದಲ್ಲಿಲ್ಲವೋ ಅದನ್ನು ಅವನಿಂದ ಹೇಗೆ ತೆಗೆದುಕೊಳ್ಳಬಹುದು."

ಪ್ರಪಂಚದಲ್ಲೆಲ್ಲ ಇರುವುದು ಒಂದು ಆತ್ಮ.

"ಊರು, ಬೆಟ್ಟ ಮುಂತಾದ ಅಸಂಖ್ಯಾತ ವಸ್ತುಗಳ ಮೇಲೆ ಬಿದ್ದಿರುವುದು ಸೂರ್ಯನ ಒಂದು ಬೆಳಕು. ವಿವಿಧವಾದ ಗುಣಗಳಿಂದ ಕೂಡಿದ ಅಸಂಖ್ಯಾತ ದೇಹಗಳಲ್ಲಿ ಹರಡಿರುವುದು ಒಂದೇ ಮೂಲದ್ರವ್ಯ. ಅನಂತ ಕೋಟಿ ಸ್ವಭಾವಗಳಲ್ಲಿ ವ್ಯಕ್ತಿ ವ್ಯಕ್ತಿಗಳಲ್ಲಿ ಹಂಚಿದ್ದರೂ ಇರತಕ್ಕುದು ಒಂದು ಆತ್ಮ. ವಿಭಾಗವಾದಂತೆ ತೋರುವುದಾದರೂ ಬುದ್ಧಿಯುಕ್ತವಾದುದು ಒಂದು ಆತ್ಮವೇ."

ಒಬ್ಬ ಮನುಷ್ಯನಿಗೆ ಬಂದಿರುವುದು ವಿಶ್ವ ಜೀವನದ ಬಹು ಸ್ವಲ್ಪ ಭಾಗ.

"ಅಪಾರವಾದ ಅಗಾಧವಾದ ಕಾಲಸಾಗರದಲ್ಲಿ ಒಬ್ಬ ಮನುಷ್ಯನಿಗೆ ಬಂದಿರುವುದು ಎಷ್ಟು ಅಲ್ಪ ಭಾಗ! ಇದು ಕಾಲದ ಅನಂತವಾಹಿನಿಯಲ್ಲಿ ಬಹು ಬೇಗ ಮುಳುಗಿ ಹೋಗುತ್ತದೆ. ಸೃಷ್ಟಿಯ ಒಟ್ಟು ದ್ರವ್ಯದಲ್ಲಿ ಪ್ರಪಂಚದ ಒಂದು ಆತ್ಮದಲ್ಲಿ ಎಷ್ಟು ಸಣ್ಣ ಭಾಗವನ್ನು ಒಬ್ಬ ಮನುಷ್ಯನಿಗೆ ಕೊಟ್ಟಿದೆ! ಭೂಮಿಯ ಎಷ್ಟು ಸಣ್ಣ ಹೆಂಟೆಯಮೇಲೆ ನೀನು ಹರಿದಾಡುತ್ತಿರುವೆ! ಇದಿಷ್ಟನ್ನು ಯೋಚಿಸಿ ನಿನ್ನ ಸ್ವಭಾವಕ್ಕನುಗುಣವಾಗಿ ನಡೆದುಕೊಂಡು ಮಾನವನಿಗೆ ಸಹಜವಾದ ಬಾಳನ್ನು ಧರಿಸುವುದು ಹೊರತು ಇನ್ನು ಯಾವುದೂ ಹಿರಿಯದಲ್ಲವೆಂದು ಭಾವಿಸು."

ಬುದ್ಧಿಯಿಂದ ನಡೆಸಲ್ಪಟ್ಟ ಜೀವನದ ಮುಖ್ಯ ಲಕ್ಷಣವಿದು. ಅದು ವಿಶ್ವದ ನಿಯಮಕ್ಕೆ ಅನುಗುಣವಾಗಿ ನಡೆಯುತ್ತದೆ.

"ಒಬ್ಬ ಮನುಷ್ಯನು ಸೃಷ್ಟಿಯ ದೇಹದಲ್ಲಿ ಹುಣ್ಣಿನಂತಾದಾಗ ಆತ್ಮಘಾತ ಮಾಡಿಕೊಂಡಂತಾಗುತ್ತದೆ. ಯಾವುದು ಸಂಭವಿಸುತ್ತದೋ ಅದರ ವಿಷಯದಲ್ಲಿ ಬೇಸರಪಡುವುದಾದರೆ ಸೃಷ್ಟಿಯಿಂದ ನಾವು ಬೇರೆ ಎಂಬಂತೆ ನಡೆದುಕೊಂಡಂತಾಯಿತು. ಯಾವ ಮನುಷ್ಯನಿಂದಲೇ ಆಗಲಿ ನೀನು ಅಸಹ್ಯದಿಂದ ದೂರ ಹೋದರೆ ಅಥವಾ ಕೋಪದಲ್ಲಿರುವವರು ಮಾಡುವಂತೆ ಅವನಿಗೆ ಹಿಂಸೆ ಮಾಡುವುದಕ್ಕೆ ಮುಂದರಿದರೆ ಅದೂ ಆತ್ಮಘಾತವೇ. ಸುಖದಿಂದಲಾಗಲೀ ಕಷ್ಟದಿಂದಲಾಗಲೀ ಅಸ್ಥಿರವಾದಾಗ ಆತ್ಮವು ತನ್ನನ್ನು ತಾನು ಘಾತಿಸಿಕೊಂಡಂತಾಯಿತು. ಕಪಟವಾಗಿ ಅಥವಾ ಸುಳ್ಳಾಗಿ ನುಡಿದು ಅಥವಾ ನಡೆದು ವೇಷ ಹಾಕಿದಾಗ ಹೀಗೆಯೇ. ತನ್ನ ಯಾವದೊಂದು ಕೆಲಸ ಅಥವಾ ನಡತೆಯನ್ನಾಗಲಿ ಗುರಿಯಿಲ್ಲದಂತೆ ನಡೆಯಬಿಟ್ಟರೆ ಅಥವಾ ಇದು ಏನು ಎಂದು ವಿಚಾರಮಾಡದೆ ನಡೆಯಿಸಿದರೆ ಅದೂ ಆತ್ಮಘಾತವೇ. ಏಕೆಂದರೆ ಯಾವ ಸಣ್ಣ ವಿಷಯವಾದರೂ ಒಂದು ಲಕ್ಷ್ಯಕ್ಕೆ ಅಧೀನವಾಗಿ ನಡೆಯಬೇಕು. ಬುದ್ಧಿಯಿರುವ ಲಕ್ಷ್ಯವು ಯಾವುದೆಂದರೆ ಬುದ್ಧಿಗೆ ಅನುಸಾರವಾಗಿ ನಡೆದುಕೊಳ್ಳತಕ್ಕದ್ದು.

"ಸದಾ ಕಾಲದಲ್ಲಿಯೂ ಸೃಷ್ಟಿಯನ್ನು ಒಂದು ದೇಹ ಒಂದು ಆತ್ಮವನ್ನುಳ್ಳ ಒಂದು ಸಜೀವಭೂತವೆಂದು ಭಾವಿಸು. ಎಲ್ಲಾ ನಡೆವಳಿಕೆಯೂ ಈ ಸಜೀವಭೂತದ ತಿಳುವಳಿಕೆಗೆ ಅನುಸಾರವಾಗಿ ನಡೆಯುತ್ತಿರುವುದನ್ನು ಕಾಣು. ಎಲ್ಲಾ ಕಾರ್ಯವೂ ಒಂದು ಗತಿಗೆ ಅನುಸಾರವಾಗಿ ಗಮಿಸುತ್ತಿರುವುದನ್ನೂ, ಎಲ್ಲವೂ ಒಂದಕ್ಕೊಂದು ಸಹಾಯವಾಗಿ ಎಲ್ಲವನ್ನೂ ನಿಲ್ಲಿಸಿರುವುದನ್ನೂ ನೋಡು. ದಾರವನ್ನು ಎಡೆಬಿಡದೆ ನೂಲುತ್ತಿರುವುದನ್ನೂ ವಸ್ತ್ರದ ನೆಯಿಗೆಯನ್ನೂ ದೃಷ್ಟಿಸು.

"ಹಿಂಡಿಗೆ ಒಳ್ಳೆಯದಲ್ಲದ್ದು ಒಂದು ದುಂಬಿಗೆ ಒಳ್ಳೆಯದಲ್ಲ. ಒಂದು ಅಂಗದ ಉಪಾಂಗಗಳು ಹೇಗೋ ಹಾಗೆ ಮಾನವ ವರ್ಗದ ಒಬ್ಬೊಬ್ಬ ವ್ಯಕ್ತಿಯು. ಈ ಉಪಾಂಗಗಳೆಲ್ಲ ಸೇರಿ ಒಂದು ಸಮಷ್ಟಿಯಾಗಿದೆ. ನಾನು ಮಾನವ ವರ್ಗವೆಂಬ ಒಂದು ಅಂಗದ ಉಪಾಂಗ ಎಂದು ನೀನು ಹೇಳಿ

ಕೊಂಡರೆ ನಿನಗೆ ಇದರ ಅರ್ಥ ಸಿದ್ಧಿಸುವುದು. ಹೀಗಲ್ಲದೆ ಹಲವು ಮನುಷ್ಯರಲ್ಲಿ ನೀನೂ ಒಬ್ಬನೆಂದು ನೆನೆದೆಯಾದರೆ ನೀನಿನ್ನೂ ಮನುಷ್ಯರನ್ನು ಸರಿಯಾಗಿ ಪ್ರೀತಿಸುತ್ತಿಲ್ಲ. ಒಳ್ಳೆಯದು ಎನ್ನುವುದನ್ನು ಮಾಡುವಷ್ಟೇ ನಿನಗೆ ಸಂತೋಷಕ್ಕೆ ಕಾರಣವಾಗಿಲ್ಲ. ಹತ್ತು ಜನಕ್ಕಾಗಿ ನೀನದನ್ನು ಮಾಡಿದ್ದು ಹಾಗೆ ಆಯಿತು; ನಿನ್ನ ಒಳ್ಳೆಯದಕ್ಕಾಗಿ ಮಾಡಿದಂತೆ ಆಗುವುದಿಲ್ಲ."

ಇದರಿಂದ ಜೀವನ ಸುಖಮಯವಾಗುತ್ತದೆ. ಇದಲ್ಲದ ಅಲ್ಪ ಸುಖವು ಜೀವನದ ಉದ್ದೇಶವಲ್ಲ.

"ಸಂತುಷ್ಟನಾಗಲು ಹೊರಗಣ ಸಹಾಯವನ್ನು ಅಪೇಕ್ಷಿಸಬೇಡ. ಇತರರು ಕೊಡುವ ಶಾಂತಿಗೆ ಕಾಯಬೇಡ. ಒಬ್ಬೊಬ್ಬನೂ ತನ್ನ ಶಕ್ತಿಯಿಂದ ನಿಲ್ಲಬೇಕು. ಇತರ ಸಹಾಯದಿಂದ ನಿಲ್ಲುವಂತೆ ಇರಬಾರದು.

"ಧರ್ಮ, ನ್ಯಾಯ, ನೀತಿ, ನಿನ್ನ ಬುದ್ಧಿಯ ಪರಿತೃಪ್ತಿ ಇದಕ್ಕಿಂತ ಒಳ್ಳೆಯದು ಯಾವುದಾದರೂ ಇದ್ದರೆ ಅದನ್ನು ಸಂಪಾದಿಸುವುದಕ್ಕೆ ಹೋಗು. ಇಲ್ಲದಿದ್ದರೆ ಇದು ಹೊರತು ಇನ್ನು ಯಾವುದಕ್ಕೂ ಒಂದು ಕ್ಷಣವಾದರೂ ಮನಸ್ಸು ಕೊಡಬೇಡ. ಈ ಹಿರಿಯದನ್ನು ಬಿಟ್ಟು ಅಲ್ಪದ್ದಕ್ಕೆ ನೀನು ಒಂದು ಸಲ ಮನಸ್ಸುಕೊಟ್ಟರೆ ಹಿಂದಿರುಗಿ ಹಿರಿಯದಕ್ಕೆ ಬರುವುದು ಕಷ್ಟವಾಗುತ್ತದೆ.

"ಎಲ್ಲಾ ವಸ್ತುವೂ ಒಂದು ಉದ್ದೇಶಕ್ಕಾಗಿದೆ. ಒಂದು ಕುದುರೆಯೆನ್ನು ಅಥವಾ ದ್ರಾಕ್ಷಿಯಬಳ್ಳಿಯೆನ್ನು. ಇದರಲ್ಲಿ ಆಶ್ಚರ್ಯವೇನು? ಸೂರ್ಯನು ಕೂಡ ನಾನು ಒಂದು ಉದ್ದೇಶಕ್ಕಾಗಿ ಇದೇನೆ ಎಂದು ಹೇಳುವನು. ಇತರ ದೇವತೆಗಳೂ ಹಾಗೆಯೇ ಹೇಳುವರು. ಹಾಗಾದರೆ ನೀನು ಇರುವುದು ಯಾವ ಉದ್ದೇಶಕ್ಕಾಗಿ? ಸುಖಪಡುವುದಕ್ಕಾಗಿಯೊ? ಇದು ಬುದ್ಧಿ ಒಪ್ಪುವ ಮಾತೆ? ಯೋಚಿಸು."

ಜೀವನವು ಸುಖವಾಗುವುದಕ್ಕೆ ಶಾಂತವಾಗಿರಬೇಕೆಂಬ ಮಾತಿಗೂ, ಶಾಂತಿಗಾಗಿ ಗುಂಪನ್ನು ತೊರೆಯಬೇಕೆಂಬ ಮಾತಿಗೂ ಈತನು ಹೀಗೆ ಹೇಳುತ್ತಾನೆ.

"ಜನರು ಶಾಂತಿಗಾಗಿ ನಿರ್ಜನ ಪ್ರದೇಶವನ್ನು ಹುಡುಕುತ್ತಾರೆ. ಗ್ರಾಮಗಳಲ್ಲಿ ಮನೆಗಳನ್ನೂ, ಸಮುದ್ರತೀರದಲ್ಲಿ ಪರ್ವತಗಳಲ್ಲಿ ವಾಸಸ್ಥಾನಗಳನ್ನೂ ನೋಡುತ್ತಾರೆ. ನೀನೂ ಇವುಗಳನ್ನು ಅಪೇಕ್ಷಿಸುವುದುಂಟು. ಆದರೆ ಇದು ಬಹು ಸಾಮಾನ್ಯರಾದವರ ಲಕ್ಷಣವಾಗಿ ಹೋಯಿತು. ಏಕೆಂದರೆ, ನಿನ್ನ ಇಷ್ಟಬಂದಾಗ ನೀನು ನಿನ್ನೊಳಗೆ ಅಡಗಿ ಶಾಂತಿಯನ್ನು ಪಡೆಯಬಹುದು. ತನ್ನ ಆತ್ಮದಲ್ಲಿ ತಾನು ಪಡೆಯಬಹುದಾದುದಕ್ಕಿಂತ ಹೆಚ್ಚು ಶಾಂತಿಯನ್ನು ಹೆಚ್ಚು ಸ್ವಾತಂತ್ರ್ಯವನ್ನು ಮನುಷ್ಯನು ಮತ್ತೆಲ್ಲಿಯೂ ಪಡೆಯಲು ಆಗಲಾರದು. ಅದರಲ್ಲೂ ಅವಲೋಕಿಸಿದೊಡನೆ ಸಂಪೂರ್ಣವಾದ ಶಾಂತಿಯನ್ನು ತರುವ ಭಾವಗಳನ್ನು ಮನಸ್ಸಿನಲ್ಲಿ ಇಟ್ಟು ಕೊಂಡಿರುವವನಿಗೆ ಈ ಮಾತು ಚೆನ್ನಾಗಿ ಒಪ್ಪುತ್ತದೆ. ಈ ಸಂಪೂರ್ಣವಾದ ಶಾಂತಿ ಎನ್ನುವುದರ ಮಾರ್ಗ ಮನಸ್ಸನ್ನು ತಿದ್ದಿಕೊಳ್ಳುವುದು ಹೊರತು ಬೇರೆ ಯಾವುದೂ ಅಲ್ಲ. ಆದುದರಿಂದ ಮನಸ್ಸಿಗೆ ಪುನಃ ಪುನಃ ಈ ನಿರ್ಜನಾವಾಸವನ್ನು ಕೊಟ್ಟು ಮರಳಿ ಮರಳಿ ನವಚೈತನ್ಯವನ್ನು ಪಡೆ.

"ಕೆಲವು ಕೆಲಸಗಳನ್ನು ಮಾತ್ರ ಇರಿಸಿಕೊ. ನೀನು ಶಾಂತನಾಗಿರುವೆ ಎಂದು ತತ್ತ್ವಜ್ಞರು ಹೇಳುತ್ತಾರೆ. ಇದಕ್ಕಿಂತ ಹೀಗೆ ಹೇಳುವುದು ಉತ್ತಮವಲ್ಲವೇ ನೋಡು. ಜನರ ಮಧ್ಯೆ ಇರುವ ಮನುಷ್ಯನಿಗೆ ಯಾವ ಯಾವ ಕೆಲಸವು ಅವಶ್ಯಕವೋ ಅದನ್ನು ಅವಶ್ಯಕವಾದಹಾಗೆ ಮಾಡು. ಹೀಗೆ ಹೇಳುವುದರಿಂದ ಕೆಲವು ಕೆಲಸಗಳನ್ನು ಮಾತ್ರ ಹಚ್ಚಿಕೊಳ್ಳುವ ಸುಖವಲ್ಲದೆ ಕರ್ತವ್ಯವಾದ ಕೆಲಸಗಳನ್ನೆಲ್ಲಾ ಮಾಡಿದ ಸುಖವೂ ಬರುತ್ತದೆ. ನಾವು ಹೇಳುವ ಮಾಡುವುದರಲ್ಲಿ ಬಹು ಭಾಗವು ಅನವಶ್ಯಕವಾದುದಾದ್ದರಿಂದ ಯಾವನಾದರೊಬ್ಬನು ಈ ಅನವಶ್ಯಕವಾದ ಭಾಗವನ್ನು ತ್ಯಜಿಸಿದರೆ ಅವನಿಗೆ ಬಿಡುವು ಹೆಚ್ಚಾಗುತ್ತದೆ; ಚಿಂತೆ ಕಡಿಮೆಯಾಗುತ್ತದೆ. ಆದಕಾರಣ ಒಂದೊಂದು ಸಂದರ್ಭದಲ್ಲಿಯೂ ಮನುಷ್ಯನು ಇದು ಅನವಶ್ಯಕವಾದ ಕೆಲಸವೋ ಎಂದು ಪ್ರಶ್ನೆ ಮಾಡಿಕೊಳ್ಳಬೇಕು. ಅನವಶ್ಯಕವಾದ ಕೆಲಸಗಳನ್ನು ಮಾತ್ರ ಬಿಟ್ಟರೆ ಸಾಲದು; ಅನವಶ್ಯಕವಾದ ಯೋಚನೆಗಳನ್ನೂ ಬಿಡಬೇಕು. ಅನುಪಯೋಗವಾದ ಯೋಚನೆಯನ್ನು ಬಿಟ್ಟರೆ ಅನುಪಯೋಗವಾದ ಕೆಲಸ ತಾನೇ ನಿಂತುಹೋಗುವುದು."

ಜನರನ್ನು ಬಿಟ್ಟುಹೋಗುವುದು ವಿಶ್ವನಿಯಮಕ್ಕೆ ವಿರೋಧ.

"ಮನುಷ್ಯರಿರುವುದು ಒಬ್ಬರೊಬ್ಬರಿಗಾಗಿ. ಜನರಿಗೆ ಒಳ್ಳೆಯದನ್ನು ಹೇಳಿಕೊಡು ಅಥವಾ ಅವರನ್ನು ಸಹನೆಯಿಂದ ಕಾಣು."

ತಿಳಿದವನು ಜನರೊಂದಿಗೆ ಸಹನೆಯಿಂದ ನಡೆದುಕೊಳ್ಳಬೇಕು.

"ದೇವತೆಗಳು ಅಮರರು. ಆದರೂ ಅನಂತಕಾಲದಿಂದ ಮನುಷ್ಯರನ್ನೂ ಅವರ ಮಧ್ಯದಲ್ಲಿ ಅನೇಕ ದುಷ್ಟರನ್ನೂ ನೋಡುತ್ತಿದ್ದರೂ ಅವರು ಬೇಸರಗೊಂಡಿಲ್ಲ. ಅಷ್ಟೇ ಅಲ್ಲ. ಮನುಷ್ಯರನ್ನು ಈಗಲೂ ಅವರು ರಕ್ಷಿಸುತ್ತಿದ್ದಾರೆ. ನಿನಗೆ ದುಷ್ಟರ ವಿಷಯದಲ್ಲಿ ಸಹನೆ ಬೇಡವೇ? ಸಾಲದ್ದಕ್ಕೆ ನೀನೂ ಅವರವನೇ.

"ಯಾವುದಾದರೂ ಒಂದು ಕೈ, ಒಂದು ಕಾಲು ಅಥವಾ ತಲೆ ಒಂದು ಕಡೆ ಕಡಿದುಬಿದ್ದಿದ್ದರೆ ಹೇಗೋ ಹಾಗೆ ಜೀವನದ ವಿಷಯದಲ್ಲಿ ಅತೃಪ್ತಿಯಿಂದ ಜನರನ್ನುಳಿದು ಒಂಟಿಯಾಗಿ ನಿಂತ ಮನುಷ್ಯನು."

ನಡತೆ ಒಳ್ಳೆಯದಾಗಬೇಕಾದರೆ ಯೋಚನೆ ಒಳ್ಳೆಯದಾಗಿರಬೇಕು.

"ನಮ್ಮ ಯೋಚನೆಯಲ್ಲಿ ಉದ್ದೇಶವಿಲ್ಲದ ಉಪಯೋಗವಿಲ್ಲದ ಯೋಚನೆಗಳನ್ನೆಲ್ಲಾ ನಾವು ತಡೆಯಬೇಕು. ಅದರಲ್ಲಿಯೂ ಮುಖ್ಯವಾಗಿ ಇನ್ನೊಬ್ಬರ ನಡೆನುಡಿಗಳಲ್ಲಿ ಕುತೂಹಲ ತೋರಿಸುವುದನ್ನೂ ಇತರರ ವಿಷಯದಲ್ಲಿ ಕ್ರೋಧದ ಸಂಬಂಧವಾದುದನ್ನೂ ತೊರೆಯಬೇಕು. ಯಾರಾದರೂ ಅಕಸ್ಮಾತ್ತಾಗಿ ನೀನು ಏನು ಯೋಚಿಸುತ್ತಿದ್ದೀಯೆ ಎಂದು ಕೇಳಿದರೆ, ಈ ವಿಷಯವನ್ನು ಎಂದು ನೀನು ಧಾರಾಳವಾಗಿ ಹೇಳಬಹುದಾದ ವಿಷಯಗಳನ್ನು ಕುರಿತು ಮಾತ್ರ ಯೋಚಿಸುವುದಕ್ಕೆ ಅಭ್ಯಾಸಮಾಡಬೇಕು. ಹಾಗೆ ನೀನು ಹೇಳಿದೆಯಾದರೆ ನಿನ್ನ ಅಂತಃಕರಣವು ಸರಳವಾಗಿದೆಯೆಂದೂ, ದಯಾಳುವಾಗಿದೆಯೆಂದೂ, ಮಾನವ ವರ್ಗದ ವ್ಯಕ್ತಿಯೊಬ್ಬನಿಗೆ ಯೋಗ್ಯವಾದದ್ದಾಗಿದೆಯೆಂದೂ ಇತರರಿಗೆ ತೋರುವಂತಿರಬೇಕು.

"ನಿನ್ನ ಯೋಚನೆಯ ವಾಡಿಕೆಗೆ ಅನುಸಾರವಾಗಿ ನಿನ್ನ ಮನಸ್ಸಿನ ರೀತಿ ಬೆಳೆಯುತ್ತದೆ. ಏಕೆಂದರೆ ಜೀವನು ಯೋಚನೆಯಿಂದ ಯೋಚನೆಯ ಬಣ್ಣಕ್ಕೆ ತಿರುಗುತ್ತಾನೆ. ಆದುದರಿಂದ ನಿನ್ನ ಜೀವವನ್ನು ನಿರಂತರವಾಗಿ

ಇಂಥ ಯೋಜನೆಗಳ ಬಣ್ಣದಿಂದ ತೊಯಿಸು. ಮನುಷ್ಯನು ಎಲ್ಲಿ ಇರ ಬೇಕಾಗಿದೆಯೋ ಅಲ್ಲಿಯೇ ಒಳ್ಳೆಯವನಾಗಿ ಇರಬಹುದು."

ವಿಶ್ವಾಸಿಯುಮಕ್ಕೆ ಅನುಸಾರವಾಗಿ ನಡೆಯಬೇಕೆನ್ನುವವನಿಗೆ ಒಂದೊಂದು ಸಂದರ್ಭದಲ್ಲಿಯೂ ಒಂದು ಉಚ್ಚಧ್ಯೇಯ ಮುಂದಿರುತ್ತದೆ. ಅವನು ಐಶ್ವರ್ಯದ ವಿಷಯದಲ್ಲಿ ಎಚ್ಚರಿಕೆಯಿಂದಿರುವನು. ಆರೀಲಿಯಸನು ತನಗೆ ತಾನೇ ಹೀಗೆ ಹೇಳಿಕೊಂಡನು.

"ನಿನ್ನನ್ನು ಚಕ್ರವರ್ತಿಯ ಗತಿಗೆ ತಂದಾರು, ಎಚ್ಚರಿಕೆಯಿಂದ ನೋಡಿಕೋ. ಏಕೆಂದರೆ ಈ ರೀತಿ ಆಗುವುದುಂಟು. ಆದುದರಿಂದ ನೀನು ಸರಳವಾಗಿಯೂ ಸುಜನನಾಗಿಯೂ ಶುದ್ಧನಾಗಿಯೂ ಗಂಭೀರ ನಾಗಿಯೂ ನಿಷ್ಕಪಟಿಯಾಗಿಯೂ ನ್ಯಾಯಪಕ್ಷಪಾತಿಯಾಗಿಯೂ ಇದ್ದು ದೇವರನ್ನು ಆರಾಧಿಸುತ್ತ ದಯಾಶಾಲಿಯೂ ಸ್ನೇಹಪರನೂ, ಒಳ್ಳೆಯ ಕೆಲಸದಲ್ಲೆಲ್ಲ ಶ್ರದ್ಧಾಳುವೂ ಆಗುವುದಕ್ಕೆ ಪ್ರಯತ್ನಮಾಡು. ದೇವರಲ್ಲಿ ಭಕ್ತಿಯಿಡು. ಮನುಷ್ಯನಿಗೆ ಒಳ್ಳೆಯದನ್ನು ಮಾಡು. ತತ್ತ್ವಜ್ಞಾನವು ನಿನ್ನನ್ನು ಎಂಥವನಾಗಿ ಮಾಡಬೇಕೆಂದು ಅಪೇಕ್ಷಿಸಿತೋ ಅಂಥವನಾಗಿರಲು ಹೆಣಗು. ಬದುಕು ನಶ್ವರ. ಇಹಲೋಕದ ಜೀವನಕ್ಕೆ ಒಂದೇ ಒಂದು ಸರಿಯಾದ ಫಲ: ಧರ್ಮಶೀಲತೆ, ಉಪಕಾರ ಕರ್ಮ. ನಿಮ್ಮ ತಾತನ ಶಿಷ್ಯನಿಗೆ ತಕ್ಕಂತೆ ನಡೆದುಕೊ. ನೀತಿಸಮ್ಮತವಾದ ಎಲ್ಲಾ ಕೆಲಸದಲ್ಲೂ ಅವನ ಸ್ಥೈರ್ಯವನ್ನೂ, ಎಲ್ಲ ಸಂದರ್ಭದಲ್ಲೂ ಅವನ ಸಮತೆಯನ್ನೂ, ಅವನ ದೈವಭಕ್ತಿಯನ್ನೂ, ಅವನ ಮುಖದ ಶಾಂತಭಾವವನ್ನೂ, ಅವನ ನಯ ಮತ್ತು ಬರಿಯ ಹೆಸರಿನ ವಿಷಯದಲ್ಲಿ ಅಶ್ರದ್ಧೆ ಇವುಗಳನ್ನೂ, ಜ್ಞಾನ ಸಂಪಾದನೆಯಲ್ಲಿ ಅವನ ಪ್ರಯತ್ನವನ್ನೂ ನೆನೆ.

"ನಿನ್ನೆದುರಿಗೆ ಆಹಾರವನ್ನಿಟ್ಟಾಗ ಇದು ಇಂಥ ಇಂಥ ವಸ್ತು ಎಂದು ನಿನ್ನ ಬುದ್ಧಿಗೆ ತೋರುತ್ತದೆ. ಈ ಉತ್ತಮ ಮಧುವು ಇಷ್ಟು ದ್ರಾಕ್ಷಿಯ ರಸ; ಈ ರಾಜವಸ್ತ್ರವು ಒಂದಿಷ್ಟು ಕುರಿಯ ಉಣ್ಣೆಯನ್ನು ತೆಗೆದು ಅದಕ್ಕೆ ಒಂದು ರೀತಿಯ ಮೀನಿನ ರಕ್ತದಿಂದ ಬಣ್ಣ ಹಚ್ಚಿ ಆಗಿರುವುದು ಎಂದು ನೀನರಿಯುವೆ. ಇದೇ ರೀತಿಯಲ್ಲಿ ಜೀವನದಲ್ಲಿ ಎಲ್ಲ ವಿಷಯದಲ್ಲಿಯೂ

ನಡೆದುಕೊಳ್ಳಬೇಕು. ಸ್ತೋತ್ರಾರ್ಹವೆಂದು ಕಾಣುವ ವಸ್ತುಗಳನ್ನೆಲ್ಲಾ ಪರೀಕ್ಷೆಮಾಡಿ ಅವುಗಳ ವೇಷವನ್ನು ಕಳೆದು ಅವುಗಳ ಯೋಗ್ಯತೆಗಳನ್ನರಿತು ಬರಿಯ ಮಾತಿನಿಂದ ದೊಡ್ಡವಾಗಿರುವವನ್ನು ಆ ಮಾತುಗಳನ್ನು ಕಳೆದು ಸಣ್ಣವಾಗಿ ಮಾಡಬೇಕು. ಈ ಹೊರಗಣ ವೇಷವೆನ್ನುವುದು ಮನುಷ್ಯನಿಗೆ ಮಂಕುಬೂದಿಯನ್ನು ಹಾಕುತ್ತದೆ. ಇದು ಅತ್ಯುತ್ತಮವಾದ ಕೆಲಸವೆಂದು ನೀನು ಏನನ್ನಾದರೂ ಮಾಡುತ್ತಿರುವ ಸಮಯದಲ್ಲಿಯೇ ಈ ರೀತಿ ಅತ್ಯಂತವಾಗಿ ಮೋಸ ಹೋಗುವೆ."

ವಿಶ್ವನಿಯಮವನ್ನು ಅರಿತವನು ಪ್ರಪಂಚ ಧರ್ಮವನ್ನು ಬಿಡುವುದಿಲ್ಲ; ಆದರೂ ಆತ್ಮ ಧರ್ಮವನ್ನು ಮರೆಯುವುದಿಲ್ಲ.

"ನಿನಗೆ ಒಬ್ಬ ತಾಯಿ ಒಬ್ಬ ಮಲತಾಯಿ ಇಬ್ಬರೂ ಇದ್ದಿದ್ದರೆ ನೀನು ಮಲತಾಯಿಗೆ ಗೌರವವನ್ನು ತೋರಿಸುತ್ತಾ ಇರುತ್ತಿದ್ದೆ; ಆದರೂ ಪುನಃಪುನಃ ತಾಯ ಬಳಿಗೆ ಬರುತ್ತಿದ್ದೆ. ರಾಜ್ಯದ ಅಧಿಕಾರವನ್ನೂ ತತ್ತ್ವಾಭ್ಯಾಸವನ್ನೂ ನಿನ್ನ ಮಲತಾಯಿ ತಾಯಿಯರಂತೆ ಕಾಣು.

"ವಸ್ತುವಿನ ಹೊರಗಣ ಆಕಾರದಿಂದ ಮೋಸ ಹೋಗಬೇಡ. ಸಣ್ಣ ವಿಷಯವಾದರೆ ಅದನ್ನು ಕೇವಲ ನಿಕೃಷ್ಟವೆಂದು ಎಣಿಸಿಬಿಡಬೇಡ. ಇದು ಒಂದು ದುರಭ್ಯಾಸ. ಮುದುಕನೊಬ್ಬನು ಹೊರಟುಹೋಗುವ ಮೊದಲು ತನ್ನ ಸಾಕುಮಗುವಿನ ಆಟದ ಬುಗುರಿಯನ್ನು ಮರೆಯದೆ ಕೇಳಿ ತೆಗೆದುಕೊಂಡು ಹೋದಂತೆ ನಡೆದುಕೊ. ಅದು ಬರಿಯ ಒಂದು ಬುಗುರಿಯೆಂಬುದನ್ನು ಆ ಮುದುಕನು ಮರೆಯಲಿಲ್ಲ. ಆದರೂ ಅದನ್ನು ಬಿಡಲಿಲ್ಲ."

ವಿಶ್ವನಿಯಮವನ್ನು ಅರಿತವನು ತನ್ನ ಶುಭಕ್ಕೆ ಇದು ದಾರಿಯೆಂದು ತುಂಬ ಕೆಲಸಮಾಡುವನು.

"ಪ್ರಕೃತಿಯು ತಿನ್ನುವುದಕ್ಕೆ ಕುಡಿಯುವುದಕ್ಕೆ ಮೇರೆಯನ್ನು ಮಾಡಿದೆ. ನೀನು ಬೇಕಾದುದಕ್ಕಿಂತ ಹೆಚ್ಚಾಗಿ ತೆಗೆದುಕೊಂಡು ಈ ಮೇರೆಗಳನ್ನು ಮೀರುವೆ. ಕೆಲಸದಲ್ಲಿ ಮಾತ್ರ ಹೀಗೆ ಮಾಡುವುದಿಲ್ಲ. ನೀನು ಮಾಡಬಹುದಾದುದಕ್ಕಿಂತ ಕಡಿಮೆಯಾಗಿ ಮಾಡುವೆ. ನಿನಗೆ ನಿನ್ನಲ್ಲಿ

ಪ್ರೇಮವಿಲ್ಲ. ಇದ್ದರೆ ಪ್ರಕೃತಿ ನಿನಗೆ ಕೊಟ್ಟಿರುವ ಸ್ವಭಾವವನ್ನೂ ಅದರ ಉದ್ದೇಶವನ್ನೂ ನೀನು ಪ್ರೀತಿಸುತ್ತಿದ್ದೆ.''

ಇಂಥವನು ಕೋಪಮಾಡುವುದಿಲ್ಲ. ಮಾಡಿದರೂ ಶೀಘ್ರದಲ್ಲಿ ಶಾಂತನಾಗುತ್ತಾನೆ.

''ಯಾವುದಾದರೂ ಸಂದರ್ಭದಲ್ಲಿ ನೀನು ಕೋಪಮಾಡಬೇಕಾಗಿ ಬಂದಲ್ಲಿ ಶೀಘ್ರದಲ್ಲಿ ಶಾಂತನಾಗು. ಆ ಸಂದರ್ಭ ಎಷ್ಟೋ ಅಷ್ಟಕ್ಕೆ ಮೀರಿ ಕೋಪದಲ್ಲಿರಬೇಡ.

''ಮತ್ತೆ ಮತ್ತೆ ಶಾಂತಿಗೆ ಬರುವುದರಿಂದ ನಿನಗೆ ಆತ್ಮ ಸಂಯಮವು ಸಿದ್ಧಿಸುತ್ತದೆ.''

ಇವನು ಅನ್ಯಾಯ ಮಾಡಿದವರಿಗೆ ಅನ್ಯಾಯ ಮಾಡುವುದಿಲ್ಲ.

''ಇನ್ನೊಬ್ಬನು ನನಗೆ ಅನ್ಯಾಯಮಾಡುವನೆ? ಅದನ್ನು ಅವನೇ ನೋಡಿಕೊಳ್ಳಲಿ. ಅವನಿಗೆ ಒಂದು ಸ್ವಭಾವವಿದೆ. ಒಂದು ಕರ್ತವ್ಯವಿದೆ. ಅವುಗಳನ್ನು ಅವನು ಕೆಡಿಸಿಕೊಳ್ಳಬಾರದು. ನನಗೂ ಸ್ವಭಾವವಾಗಿ ಕೆಲವು ಗುಣಗಳಿವೆ. ನಾನು ಅವುಗಳನ್ನನುಸರಿಸಿ ನಡೆದುಕೊಳ್ಳುತ್ತೇನೆ.

''ನಿನಗೆ ಯಾರಾದರೂ ಅನ್ಯಾಯ ಮಾಡಿದನೇ? ಅವನು ಅನ್ಯಾಯ ಮಾಡಿದ್ದು ನಿನಗಲ್ಲ ತನಗೇ.''

ತನಗೆ ಅಪಕಾರಮಾಡಿದವನಿಗೆ ಒಳ್ಳೆಯದನ್ನೇ ಮಾಡುತ್ತಾನೆ.

''ನಿನಗೆ ಕೆಟ್ಟುದನ್ನು ಮಾಡಿದವನಿಗೆ ದೊಡ್ಡ ಶಿಕ್ಷೆಯನ್ನು ಮಾಡುವುದು ಹೇಗೆಂದರೆ ನೀನು ಅವನಂತೆ ಮಾಡದೇ ಇರುವುದರಿಂದ.''

ಪ್ರಾಜ್ಞನು ಜನರ ಸ್ತೋತ್ರವನ್ನು ಅಪೇಕ್ಷಿಸುವುದಿಲ್ಲ.

''ತನ್ನ ಕಾಲಾನಂತರ ಜನರು ತನ್ನನ್ನು ಸ್ತೋತ್ರಮಾಡಬೇಕೆಂದು ಅಪೇಕ್ಷಿಸುವವನು ಆ ಸ್ತೋತ್ರಮಾಡುವವರೂ ತನ್ನಂತೆಯೇ ಸ್ವಲ್ಪ ಕಾಲ ಕಳೆದಮೇಲೆ ತೀರಿಹೋಗುವವರೆಂದೂ ಅವರ ಮಾತನ್ನು ಕೇಳಿ ಸ್ತೋತ್ರ ಮಾಡುವವರು ಅದಾದ ಕೆಲವು ಕಾಲದಲ್ಲಿ ತೀರಿಹೋಗುವವರೆಂದೂ ಹೀಗೆ ತೀರಿಹೋಗುವ ಜನರ ಬಾಯಿಂದ ಬಾಯಿಗೆ ಹೋಗುವುದರಲ್ಲಿ ಆ ಹೆಸರೆನ್ನುವುದು ಮಲಿನವಾಗುವುದೆಂದೂ ಗಮನಿಸುವುದಿಲ್ಲ. ಅಥವಾ ಸ್ತೋತ್ರಮಾಡುವವರು ಅಮರರೆಂದೇ ಎಣಿಸೋಣ; ಸ್ತುತಿಯೂ

ಅಮರವಾದೀತೆನ್ನೋಣ. ಇದರಿಂದ ನಿನಗೇನು ಪ್ರಯೋಜನ? ಎಂದಗೆ ಸತ್ತಮೇಲೆ ನಿನಗೆ ಪ್ರಯೋಜನವೇನೆಂದಲ್ಲ. ಜೀವಂತನಾಗಿರುವಾಗಲೇ ಆಗಲಿ ನಿನಗೆ ಇದರಿಂದ ಆದುದೇನು? ಏನಾದರೂ ಒಂದು ಉಪಯೋಗ ವಿಲ್ಲದಿದ್ದರೆ ಸ್ತೋತ್ರ ಏಕೆ ಬೇಕು?

"ಮನುಷ್ಯರು ನಿನ್ನನ್ನು ಕೊಂದರೇನು? ತುಂಡುಮಾಡಿದರೇನು? ಶಪಿಸಿದರೇನು? ಇದರಿಂದ ನೀನು ಶುದ್ಧಚಿತ್ತನೂ ಜ್ಞಾನಿಯೂ ನ್ಯಾಯ ಶೀಲನೂ ಶಾಂತನೂ ಆಗಿರುವುದಕ್ಕೆ ಅಡ್ಡಿ ಏನು? ಒಬ್ಬ ಮನುಷ್ಯನು ತಿಳಿನೀರ ಚಿಲುಮೆಯೊಂದರ ಪಕ್ಕದಲ್ಲಿ ನಿಂತು ಅದನ್ನು ಶಪಿಸಿದಮಾತ್ರಕ್ಕೆ ಚಿಲುಮೆಯು ಪಾನಾರ್ಹವಾದ ನಿರ್ಮಲೋದಕವನ್ನು ಸೂಸದೆಬಿಡುವು ದಿಲ್ಲ. ಅವನು ಅದರಲ್ಲಿ ಒಂದು ಹೆಂಟೆಯನ್ನು ಹಾಕಿದರೂ ಕೂಡ ಉತ್ತರ ಕ್ಷಣದಲ್ಲಿ ಅದು ಕಸವನ್ನು ಚದರಿಸಿ ತೊಳೆದುಬಿಡುತ್ತದೆ; ತಾನೂ ಕಶ್ಮಲ ದಿಂದ ಬಿಡುಗಡೆ ಹೊಂದುತ್ತದೆ. ನೀನೂ ಬರಿಯ ಬಾವಿಯಾಗದೆ ಇಂಥ ಚಿಲುಮೆಯಾಗುವುದು ಹೇಗೆ? ಕ್ಷಣಕ್ಷಣವೂ ಸೌಜನ್ಯ ಸರಳತೆ ವಿನಯ ಇವುಗಳಿಂದ ಕೂಡಿದ ಅನನ್ಯತಂತ್ರತೆಗೆ ಪ್ರಯತ್ನಮಾಡುವುದರಿಂದ."

ಸ್ತೋತ್ರದಿಂದ ಸಣ್ಣದು ದೊಡ್ಡದಾಗುವುದಿಲ್ಲ. ತೆಗಳಿಕೆಯಿಂದ ದೊಡ್ಡದು ಸಣ್ಣದಾಗುವುದಿಲ್ಲ.

"ಯಾವ ರೀತಿಯಲ್ಲಾದರೂ ಸುಂದರವೆನಿಸಿದ ಒಂದು ವಸ್ತುವು ತನ್ನ ಗುಣದಿಂದ ತಾನು ಸುಂದರವಾಗಿರುವುದು; ತನ್ನಲ್ಲಿ ತಾನು ಮುಗಿಯು ವುದು; ಸ್ತೋತ್ರವನ್ನು ಒಂದು ಭಾಗವಾಗಿ ಪಡೆದಿರುವುದಿಲ್ಲ. ಆದುದರಿಂದ ಸ್ತೋತ್ರಮಾಡಿದ ಮಾತ್ರಕ್ಕೇ ಆ ವಸ್ತುವು ಸೌಂದರ್ಯದಲ್ಲಿ ಹೆಚ್ಚುವುದೂ ಇಲ್ಲ; ಇಲ್ಲದಿದ್ದರೆ ಕಡಿಮೆಯಾಗುವುದೂ ಇಲ್ಲ. ನಿಜವಾಗಿಯೂ ಸುಂದರ ವಾದ ವಸ್ತುವಿಗೆ ಇನ್ನೇನೂ ಬೇಕಾಗಿರುವುದಿಲ್ಲ. ಧರ್ಮದಂತೆ ಸತ್ಯದಂತೆ ದಯೆಯಂತೆ ವಿನಯದಂತೆ. ಇವುಗಳಲ್ಲಿ ಯಾವುದು ಸ್ತೋತ್ರದಿಂದ ಸುಂದರವಾಗುತ್ತದೆ? ದೂಷಣೆಯಿಂದ ಕೆಡುತ್ತದೆ? ಮರಕತವು ಸ್ತೋತ್ರ ವಿಲ್ಲದಿದ್ದರೆ ತನ್ನ ಯೋಗ್ಯತೆಯನ್ನು ಕಳೆದುಕೊಳ್ಳುವುದೇ? ಚಿನ್ನ, ದಂತ, ಹಳದಿಯಬಣ್ಣ, ಒಂದು ವೀಣೆ, ಒಂದು ಸಣ್ಣಚೂರಿ, ಒಂದು ಹೂ, ಒಂದು ಲತೆ — ಇವುಗಳು ಹಾಗಾಗುವುವೆ?"

ಇದನ್ನು ಮರೆತು ಹೊಗಳಿಕೆಗೆ ಸಂತೋಷಪಡುವುದೂ, ತೆಗಳಿಕೆಗೆ ನೋಯುವುದೂ ಅಜ್ಞಾನದ ಚಿಹ್ನೆ.

"ನನಗೆ ಅನೇಕವೇಳೆ ಆಶ್ಚರ್ಯವಾಗಿದೆ. ಒಬ್ಬೊಬ್ಬನೂ ಇತರ ಎಲ್ಲರಿಗಿಂತ ತನ್ನಲ್ಲಿ ಹೆಚ್ಚಾದ ನಂಬಿಕೆಯನ್ನಿಟ್ಟುಕೊಂಡಿರುತ್ತಾನೆ. ಆದರೆ ತಾನು ಎಂಥವನೆಂಬ ವಿಷಯದಲ್ಲಿ ತನ್ನ ಅಭಿಪ್ರಾಯಕ್ಕಿಂತಲೂ ಬೇರೆ ಯಾವನೇ ಆಗಲಿ ಅವನ ಅಭಿಪ್ರಾಯಕ್ಕೆ ಹೆಚ್ಚು ಬೆಲೆಯನ್ನು ಕೊಡುತ್ತಾನೆ."

ನಿಜವಾಗಿ ಬುದ್ಧಿವಂತನಾದವನು ಇನ್ನೊಬ್ಬರಿಗೆ ಹೇಳುವ ಬದಲು ತಾನು ಸರಿಯಾಗಿ ನಡೆಯುತ್ತಾನೆ.

"ಒಳ್ಳೆಯವನು ಹೇಗಿರಬೇಕೆಂದು ಮಾತನಾಡಿದುದು ಸಾಕು. ಒಳ್ಳೆಯವನಾಗಿರು.

"ಓದುವುದರಲ್ಲಿ ಬರೆಯುವುದರಲ್ಲಿ ಇದು ನಿಯಮ ಇದು ಸೂತ್ರ ಎಂದು ಇತರರಿಗೆ ಹೇಳುವುದಕ್ಕೆ ಮೊದಲು ನಿನಗೆ ಅದನ್ನು ಅನುಸರಿಸುವುದಕ್ಕೆ ಬಂದಿರಬೇಕು. ಸರಿಯಾಗಿ ಬಾಳುವುದು ಹೇಗೆ ಎಂಬುದರಲ್ಲಿಯೂ ಹೀಗೆಯೇ."

ಜ್ಞಾನಿಯು ಇಲ್ಲದ ಕಷ್ಟಗಳನ್ನು ಊಹಿಸಿ ಕ್ಷೋಭೆಪಡುವುದಿಲ್ಲ.

"ಜೀವನವನ್ನೆಲ್ಲಾ ಕುರಿತು ಯೋಚನೆಮಾಡಿ ಕ್ಷೋಭೆಪಡಬೇಡ. ಮುಂದೆ ಬರಬಹುದೆನ್ನುವ ಎಲ್ಲ ಕಷ್ಟಗಳನ್ನೂ ಒಂದೇಸಲ ಮನಸ್ಸಿಗೆ ತಾರದಿರು. ಒಂದೊಂದು ಸಂದರ್ಭದಲ್ಲಿಯೂ ಈಗ ದುರ್ಧರವಾದದ್ದು ಏನಿದೆ ಎಂದು ಯೋಚಿಸು. ನೀನೇ ನಾಚಿಕೆಗೊಳ್ಳುವೆ: ಅಲ್ಲದೆ ನಿನಗೆ ನೋವನ್ನು ಕೊಡುವುದು ಭೂತಭವಿಷ್ಯತ್ತುಗಳ ಸ್ಥಿತಿಯಲ್ಲ; ವರ್ತಮಾನ ಕಾಲದ್ದು. ಎಲ್ಲೆ ಕಟ್ಟಿದರೆ ಇದು ಬಹಳ ಅಲ್ಪಕಾಲವಾಗುತ್ತದೆ. ಇಷ್ಟನ್ನು ತಡೆಯುವುದಕ್ಕಾಗದಿದ್ದರೆ ನಿನ್ನ ಮನಸ್ಸಿಗೆ ಬುದ್ಧಿ ಹೇಳು. ಕಷ್ಟವು ಸಹ್ಯವಾಗುವುದು."

ಇದಕ್ಕೆ ಉದಾಹರಣೆ ದಿನದ ಜೀವನದಲ್ಲಿರುತ್ತದೆ.

"ಕಾಣುವುದೆಷ್ಟೋ ಅದಷ್ಟಕ್ಕಿಂತ ಹೆಚ್ಚಾಗಿ ಏನನ್ನೂ ಊಹಿಸಿಕೊಳ್ಳಬೇಡ. ಯಾವನೋ ಒಬ್ಬನು ನಿನ್ನನ್ನು ನಿರಾಕರಿಸಿ ಮಾತನಾಡಿದನೆಂದು

ನಿನಗೆ ತಿಳಿಯಿತೋ? ಸರಿ. ಅವನು ಹಾಗೆ ಮಾತನಾಡಿದನಂತೆ. ಆದರೆ ಆ ಮಾತಿನಿಂದ ನಿನಗೆ ಕೇಡಾಯಿತೆಂದು ಯಾರೂ ಹೇಳಿಲ್ಲ. ಕೇಡಾಯಿತೆಂದು ನೀನು ಎಣಿಸಬೇಡ. ನಿನ್ನ ಮಗುವಿಗೆ ಮೈಯಲ್ಲಿ ಚೆನ್ನಾಗಿಲ್ಲ. ಸರಿ. ಇದು ತಿಳಿಯಿತು. ಆದರೆ ಮಗು ಬದುಕುವುದು ಕಷ್ಟವೆಂದು ನನಗೆ ಕಾಣುವುದಿಲ್ಲ. ಹಾಗೆಂದು ನಾನು ಎಣಿಸುವುದೂ ಇಲ್ಲ. ಎಂದರೆ ಯಾವಾಗಲೂ ಎಷ್ಟು ಕಾಣುತ್ತದೋ ಅಷ್ಟಕ್ಕೆ ಅನುಗುಣವಾಗಿ ನಡೆದುಕೊಳ್ಳಬೇಕು. ಕಂಡ ವಿಷಯಕ್ಕೆ ನಮ್ಮ ಒಳಗಣಿಂದ ಮತ್ತಷ್ಟನ್ನು ಸೇರಿಸಬಾರದು. ಹೀಗೆಂದಲ್ಲಿ ನಿನಗೆ ಕೆಟ್ಟದಾಗುವುದಿಲ್ಲ.''

ಹೆಚ್ಚಾದ ಕಷ್ಟ ನಿಜವಾಗಿಯೂ ಬಂದರೆ ಜ್ಞಾನಿಯು ಸಹಿಸುತ್ತಾನೆ. ಏಕೆಂದರೆ ಆದದ್ದೆಲ್ಲಾ ಒಳ್ಳೆಯದೆ.

''ತಿಳುವಳಿಕೆ ಇಲ್ಲದವರು ಒಂದೊಂದು ಸಂದರ್ಭದಲ್ಲಿ ಕಷ್ಟವನ್ನು ಧೈರ್ಯದಿಂದ ಸಹಿಸುತ್ತಾರೆ. ತಿಳುವಳಿಕೆ ಇರುವವರು ಇವರಿಗಿಂತ ಕಡಿಮೆಯಾಗಬಹುದೇ? ಎಂದರೆ ಅಂಥ ಕಷ್ಟಗಳನ್ನು ಇನ್ನೂ ಹೆಚ್ಚಾದ ಧೈರ್ಯದಿಂದ ಸೈರಿಸಬೇಕು.

''ಸಮುದ್ರದ ತರಂಗವು ಬಡಿಯುತ್ತಿರುವ ಗಂಡಶೈಲದಂತಿರು. ತೆರೆ ಎಷ್ಟು ಅಪ್ಪಳಿಸಿದರೂ ಅದು ಅಲುಗದೆ ನಿಲ್ಲುತ್ತದೆ. ತನ್ನ ಸುತ್ತಣ ನೀರಿನ ರಭಸವನ್ನು ಜಯಿಸುತ್ತದೆ.

''ನಿನಗೆ ಯಾವುದು ಸಂಭವಿಸುತ್ತದೋ ಅದನ್ನು ಪ್ರೀತಿಸು. ಅದು ನಿನ್ನ ಅದೃಷ್ಟದಲ್ಲಿ ಬೆರೆತುಬಂದಿದೆ. ನಿನಗೆ ಇದಕ್ಕಿಂತ ತಕ್ಕದ್ದು ಏನುಂಟು?

''ವೈದ್ಯನು ತನ್ನ ಬಳಿಗೆ ಬಂದವರಲ್ಲಿ ಒಬ್ಬೊಬ್ಬನಿಗೆ ಅವನ ಪ್ರಕೃತಿಗೆ ತಕ್ಕಂತೆ ಚಿಕಿತ್ಸೆಯನ್ನು ಒದಗಿಸುವನು. ಹೀಗೆಯೇ ಒಬ್ಬೊಬ್ಬನ ಜೀವನದ ಸಂಗತಿಯು ದೈವಿಕ ಶಕ್ತಿಯಿಂದ ಅವನೆದುರಿಗೆ ಒಳ್ಳೆಯದಾಗುವುದಕ್ಕಾಗಿ ನಿಯುಕ್ತವಾಗಿದೆ.''

ಇಲ್ಲದ್ದನ್ನು ಕುರಿತು ಮರುಗುವುದಕ್ಕಿಂತ ಇರುವುದನ್ನು ಕುರಿತು ಸಂತುಷ್ಟನಾಗಿರುವುದೂ, ಅದನ್ನು ಸರಿಯಾಗಿ ವಿನಿಯೋಗಿಸುವುದೂ ಯೋಗ್ಯ.

"ನಿನಗೆ ಇರತಕ್ಕದ್ದನ್ನು ಕುರಿತು ಇಲ್ಲದಿರುವುದನ್ನು ಕುರಿತದ್ದಕ್ಕಿಂತ ಹೆಚ್ಚಾಗಿ ಯೋಚಿಸು.

"ಜನರು ಹೊಗಳುವ ಬುದ್ಧಿ ನನ್ನಲ್ಲಿಲ್ಲವೆಂದು ಕೊರಗಬೇಡ. ಅಂಥ ಬುದ್ಧಿ ಇಲ್ಲದಿದ್ದರೆ ಹೋಗಲಿ; ನಿನಗಿಲ್ಲವೆಂದು ಹೇಳಲಾಗದ ಎಂದರೆ ನಿನಗೆ ನಿಜವಾಗಿಯೂ ಇರುವ ಇತರ ಗುಣಗಳನೇಕ ಉಂಟು. ನಿನ್ನ ಶಕ್ತಿಯಲ್ಲಿರುವ ಆ ಗುಣಗಳನ್ನು ನಿನ್ನ ಬದುಕಿನಲ್ಲಿ ತೋರಿಸು. ಅಕುಟಿಲತೆ ಗಾಂಭೀರ್ಯ ಕಷ್ಟಸಹಿಷ್ಣುತೆ ವೈರಾಗ್ಯ, ದೇವರು ನಿನಗೆ ಕೊಟ್ಟಿರುವ ಕೆಲವು ಪದಾರ್ಥಗಳಲ್ಲಿ ತೃಪ್ತಿ, ದಯಾಪರತೆ ಸರಳತೆ, ಹೆಚ್ಚು ಬೇಡವೆನ್ನುವುದು ಬಾಲಿಶನಾಗಿಲ್ಲದಿರುವುದು, ಔದಾರ್ಯ, ಇವನ್ನು ತೋರು. ನೀನು ಒಡನೆಯೇ ತೋರಿಸಬಹುದಾದ ನಿನ್ನಲ್ಲಿಲ್ಲವೆಂದು ಹೇಳಲಿಕ್ಕಾಗದ ಗುಣಗಳು ಎಷ್ಟಿವೆ ನೋಡಿದೆಯೊ? ಇವುಗಳಲ್ಲೆಲ್ಲ ನೀನು ಹೀನನಾಗಿ ಹಿಂದುಳಿದಿರುವೆ."

ತಿಳಿದವನು ತಾನು ಉಪಕಾರಮಾಡಿದೆನೆಂದು ಉಬ್ಬುವುದಿಲ್ಲ.

"ಒಬ್ಬ ಮನುಷ್ಯನು ಮತ್ತೊಬ್ಬನಿಗೆ ಸ್ವಲ್ಪ ಉಪಕಾರಮಾಡಿದೊಡನೆ ತಾನು ಅಷ್ಟುಮಟ್ಟಿಗೆ ಆ ಮತ್ತೊಬ್ಬನನ್ನು ಉದ್ಧಾರಮಾಡಿದೆ ಎಂದು ಎಣಿಸುವುದಕ್ಕೆ ಉದ್ಯುಕ್ತನಾಗುತ್ತಾನೆ. ಇನ್ನೊಬ್ಬನು ಇಷ್ಟು ದೂರ ಹೋಗುವುದಿಲ್ಲ. ಆದರೂ ತನ್ನಿಂದ ಆ ಮತ್ತೊಬ್ಬನು ಉಪಕೃತನಾದನೆಂದು ಭಾವಿಸುತ್ತಾನೆ. ತಾನು ಒಳ್ಳೆಯ ಕೆಲಸವನ್ನು ಮಾಡಿದೆನೆಂಬುದನ್ನು ತಿಳಿದಿರುತ್ತಾನೆ. ಮೂರನೆಯವನು ಒಂದು ರೀತಿಯಲ್ಲಿ ತಾನು ಮಾಡಿದ್ದೇನೆಂಬುದನ್ನೇ ಅರಿಯದಿರುತ್ತಾನೆ. ಇವನು ದ್ರಾಕ್ಷಿಯ ಹಣ್ಣನ್ನು ಬಿಟ್ಟ ದ್ರಾಕ್ಷಿಯ ಬಳ್ಳಿಯಂತೆ ಇರುತ್ತಾನೆ. ಆ ಬಳ್ಳಿಯು ಆ ಹಣ್ಣನ್ನು ಧರಿಸಿದ ಮೇಲೆ ಮತ್ತೇನನ್ನೂ ಅಪೇಕ್ಷಿಸುವುದಿಲ್ಲ. ಓಡಿರುವ ಕುದುರೆಯಂತೆ ಮೃಗವನ್ನು ಹಿಡಿದ ಬೇಟೆಯ ನಾಯಂತೆ ಮಧುವನ್ನು ಕುಡಿದ ದುಂಬಿಯಂತೆ ಒಂದು ಒಳ್ಳೆಯ ಕೆಲಸವನ್ನು ಮಾಡಿದರೆ ಮನುಷ್ಯನಾದವನು ತಾನು ಮಾಡಿದುದನ್ನು ನೋಡಬನ್ನಿ ಎಂದು ಎಲ್ಲರನ್ನೂ ಕರೆಯುವುದಿಲ್ಲ; ಈ ಒಳ್ಳೆಯ ಕೆಲಸ ಮುಗಿದಮೇಲೆ ಮತ್ತೊಂದು ಫಲದ ಕಾಲದಲ್ಲಿ

ಮತ್ತೆ ಹಣ್ಣು ಬಿಡುವ ದ್ರಾಕ್ಷಿಯ ಬಳ್ಳಿಯಂತೆ ಮತ್ತೆ ಒಳ್ಳೆಯ ಕೆಲಸವನ್ನು ಮಾಡುವುದಕ್ಕೆ ತೊಡಗುತ್ತಾನೆ. ಹಾಗಾದರೆ ಮನುಷ್ಯನು ತಾನು ಮಾಡುತ್ತಿರುವುದು ಏನೆಂದು ಅರಿಯದವನಂತೆ ಇರಬೇಕೆನ್ನುವೆಯಾ? ಹೌದು, ಇರಬೇಕು. ಆದರೆ ಅರಿಯುವುದು ಅವಶ್ಯಕ. ಹತ್ತು ಜನದಲ್ಲಿರುವ ಮನುಷ್ಯನು ಹತ್ತು ಜನಕ್ಕೆ ಯಾವುದು ಒಳ್ಳೆಯದೆಂಬುದನ್ನು ಯೋಚಿಸಿಯೇ ಮಾಡಬೇಕು, ತಾನು ಮಾಡುತ್ತಿರುವುದನ್ನು ಇತರರು ತಿಳಿಯಲೆಂದು ಅಪೇಕ್ಷಿಸಬೇಕು ಎಂದು ಹೇಳುವೆ. ನೀನು ಹೇಳುವುದು ನಿಜ. ಆದರೆ ನಾನು ಹೇಳಿದ್ದನ್ನು ನೀನು ಸರಿಯಾಗಿ ತೆಗೆದುಕೊಳ್ಳಲಿಲ್ಲ. ಈ ಕಾರಣದಿಂದ ನೀನು ಮೇಲೆ ಹೇಳಿದ ಜಾತಿಗಳಲ್ಲಿ ಮೊದಲ ಜಾತಿಗೆ ಸೇರುವೆ. ನಾನು ಹೇಳುವ ಮಾತನ್ನು ಸರಿಯಾಗಿ ತಿಳಿಯುವೆಯಾದರೆ ಹತ್ತು ಜನಕ್ಕೆ ನಿನ್ನಿಂದ ಆಗಬೇಕಾದ ಕಾರ್ಯವನ್ನು ನೀನು ಮಾಡದೆ ಬಿಡುವುದಿಲ್ಲ.''

ಜ್ಞಾನಿಯು ಸಾವಿನ ನೆನವಿನಿಂದ ಅಶಾಂತನಾಗುವುದಿಲ್ಲ. ಅದು ಒಂದು ಸಹಜವಾದ ಅವಸ್ಥೆ. ಆದ್ದರಿಂದ ಅದನ್ನು ಅವನು ಸಮಾಧಾನದಿಂದ ಭಾವಿಸುತ್ತಾನೆ.

''ಸ್ವಭಾವವಾಗಿ ಏನೇನು ಆಗುತ್ತದೋ ಅದರಲ್ಲಿ ನಾನು ಸಮಾಧಾನವಾಗಿ ನಡೆಯುತ್ತೇನೆ. ಕೊನೆಗೆ ನನ್ನ ಉಸುರನ್ನು ಎಲ್ಲಿಂದ ತೆಗೆದುಕೊಳ್ಳುತ್ತೇನೋ ಆ ವಾಯುಮಂಡಲಕ್ಕೆ ಬಿಡುತ್ತೇನೆ. ನನ್ನ ತಂದೆತಾಯಿದಾದಿಯರು ಯಾವ ಭೂಮಿಯಿಂದ ನನ್ನ ಜನ್ಮಕ್ಕಾಗಿ ಬೆಡಗಿಗಾಗಿ ಪದಾರ್ಥಗಳನ್ನು ತೆಗೆದುಕೊಂಡರೋ ಯಾವುದರಿಂದ ನಾನು ಇಷ್ಟುಕಾಲ ಅನ್ನ ನೀರನ್ನು ಪಡೆದೆನೋ ಯಾವುದು ನಾನು ನಡೆಯುವಾಗ ಇತರ ವಿಧದಲ್ಲಿ ಅದನ್ನು ಕೆಡಿಸುವಾಗ ನನ್ನನ್ನು ಸಮಾಧಾನವಾಗಿ ಧರಿಸಿರುವುದೋ ಆ ಭೂಮಿಯಲ್ಲಿ ಉರುಳಿಹೋಗುತ್ತೇನೆ.

''ಅಲೆಕ್ಸಾಂಡರನೂ ಅವನ ಸೇವಕನೂ ಸಾವಿನಿಂದ ಒಂದೇ ಸ್ಥಿತಿಗೆ ಬಂದರು. ಎಂದರೆ ಇಬ್ಬರೂ ಸೃಷ್ಟಿಯ ಸಾಮಾನ್ಯವಾದ ಮೂಲತತ್ತ್ವದಲ್ಲಿ ಅಡಗಿದರು. ಅಥವಾ ಪಂಚಭೂತಗಳಲ್ಲಿ ಅವರ ಅಂಶವು ಹರಡಿ ಹೋಯಿತು.

"ಕುಸ್ತಿಯ ಕಣದಲ್ಲಿ ಅಥವಾ ನಾಟಕದಲ್ಲಿ ನೋಡಿದುದನ್ನೇ ನೋಡುತ್ತಾ ನಿನಗೆ ಬೇಸರವಾಗುವಂತೆ ಬದುಕಿನಲ್ಲಿಯೂ ಆಗುತ್ತದೆ. ಮೇಲೆ ಕೆಳಗೆ ಎಲ್ಲ ಸಮಸ್ತವೂ ಒಂದೇ ರೀತಿ. ಹೀಗಾದಮೇಲೆ ಇದು ಎಷ್ಟು ದಿನ?

"ಸಾವು ಎಂದರೆ ತಿರಸ್ಕಾರಬೇಡ. ಅದರ ವಿಷಯದಲ್ಲಿ ಸಮಾಧಾನ ದಿಂದಿರು. ಎಳೆಯರಾಗಿರುವುದು, ಹಿರಿಯರಾಗಿ ಬೆಳೆಯುವುದು, ಬಲಿಯು ವುದು, ಪ್ರಾಯವಂತರಾಗುವುದು, ಹಲ್ಲು ಬಂದು ಮೀಸೆ ಬೆಳೆದು ತಲೆ ನರೆಯುವುದು, ಹೆರುವುದು, ಹೊರುವುದು, ಬದುಕು ತರುವ ಇನ್ನೆಲ್ಲ ಸಹಜ ಕರ್ಮಗಳು: ಇವುಗಳಂತೆಯೇ ಮೈಕರಗುವುದೂ ಸಹಜ. ಆದುದರಿಂದ ಯೋಚನಾಪರನಾದವನು ಸಾವೆಂದರೆ ಅಜಾಗ್ರತೆಯಿಂದಲೂ ಇರಬಾರದು; ಬರಲಿಲ್ಲವೇ ಎಂದು ಆತುರಪಡಲೂ ಬಾರದು, ಅದರ ವಿಷಯದಲ್ಲಿ ಧಿಕ್ಕಾರವನ್ನೂ ತೋರಬಾರದು. ನಿನ್ನ ಪತ್ನಿಯ ಗರ್ಭದಿಂದ ನಿನಗೊಂದು ಮಗು ಆಗುವುದಕ್ಕೆ ದಿನ ಕಾಯುವಂತೆ ಈ ಬದುಕಿನ ಗರ್ಭದಿಂದ ನಿನ್ನ ಆತ್ಮವು ಬಿಡುಗಡೆ ಹೊಂದುವ ಸಮಯಕ್ಕೂ ದಿನ ಕಾಯುತ್ತಿರು ಹಾಗೆಯೇ ಸಿದ್ಧನಾಗಿರು. ಇಷ್ಟಲ್ಲದೆ ಕಡಿಮೆಯ ತೆರದ ಮತ್ತೊಂದು ಸಮಾಧಾನ ಬೇಕೆನ್ನುವೆಯಾದರೆ ನೀನು ಕಳೆದುಕೊಳ್ಳುವುದು ಏನು ಎಂಬುದನ್ನು ಯೋಚಿಸಿ ನೋಡು; ಸಾವಿಗೆ ನೀನೊಪ್ಪಿಗೆಯನ್ನು ಕೊಡುವೆ.

"ಅಯ್ಯಾ, ನೀನು ಈ ರಾಜ್ಯದ ಒಬ್ಬ ನಾಗರಿಕನಾಗಿದ್ದೆ. ಐದು ವರ್ಷ ಇದ್ದೆಯೋ ಮೂರು ವರ್ಷ ಇದ್ದೆಯೋ. ಈ ವ್ಯತ್ಯಾಸದಿಂದ ಏನಾಯಿತು? ರಾಜ್ಯದ ನೀತಿಗೆ ಅನುಗುಣವಾಗಿರಬೇಕು. ನಡೆದದ್ದು ಎಲ್ಲರಿಗೂ ಸಮ್ಮತವಾಗಿರಬೇಕು. ರಾಜ್ಯದಿಂದ ನಿನ್ನನ್ನು ಕಳುಹಿಸುವವನು ಕ್ರೂರನಾದ ರಾಜನಲ್ಲ, ನ್ಯಾಯ ಶತ್ರುವಾದ ಅಧಿಕಾರಿಯಲ್ಲ, ನಿನ್ನನ್ನು ಇಲ್ಲಿಗೆ ತಂದ ನಿಸರ್ಗ ಮಾತೆ. ಇದರಿಂದ ನಿನಗೆ ತೊಂದರೆ ಏನು? ನಟನನ್ನು ಬರಮಾಡಿಕೊಂಡ ಸೂತ್ರಧಾರನು ಅವನನ್ನು ಹೋಗೆಂದು ಕಳುಹಿಸಿದ ಹಾಗೆ. ನಾನಿನ್ನೂ ಐದು ಅಂಕಗಳನ್ನು ಮುಗಿಸಿಲ್ಲ, ಮೂರು ಮಾತ್ರ ಮುಗಿದಿವೆ ಎಂದು ಹೇಳುವೆಯಾ? ನೀನು ಹೇಳುವುದು ಸರಿ. ಆದರೆ ಬದುಕಿನಲ್ಲಿ

ಮೂರು ಅಂಕವೇ ಒಟ್ಟು ನಾಟಕ. ಈ ಒಟ್ಟು ನಾಟಕವೆನ್ನುವುದು ಎಷ್ಟು ಅಂಕವಾಗಬೇಕೆಂದು ನಿರ್ಧರಿಸುವವನು ಇದನ್ನು ಅಂದು ಸೃಷ್ಟಿಮಾಡಿ ಇಂದು ಅಳಿಸುವಂಥವನು. ನೀನು ಆ ಸೃಷ್ಟಿಗೂ ಕಾರಣನಲ್ಲ; ಈ ಅಳಿವಿಗೂ ಕಾರಣನಲ್ಲ. ಆದಕಾರಣ ನೀನು ಸಮಾಧಾನವಾಗಿ ವಿಶ್ರಾಂತನಾಗು. ನಿನ್ನನ್ನು ಬಿಡುಗಡೆ ಮಾಡುವವನು ಸಮಾಧಾನ ವಾಗಿದ್ದಾನೆ."

ತಿಳಿದವನು ಸಾವು ಈಗ ಬೇಡ ಆಮೇಲೆ ಬರಲಿ ಎನ್ನಲಾರನು.

"ದೇವತೆಯೊಬ್ಬನು ನಿನಗೆ 'ನೀನು ನಾಳೆ ಸಾಯುವೆ; ನಾಳೆ ತಪ್ಪಿ ದರೂ ನಾಡಿದ್ದು ಖಂಡಿತ ಸಾಯುವೆ' ಎಂದು ಹೇಳಿದರೆ ನೀನು 'ನಾಳೆ ಯಾದರೇನು ನಾಡಿದ್ದಾದರೇನು' ಎನ್ನುವೆ. ಅತ್ಯಲ್ಪನಾದ ಮನುಷ್ಯನು ಹೊರತು ಯಾವನೂ ಈ ಒಂದು ದಿನದ ವ್ಯತ್ಯಾಸದಿಂದ ಸಂತುಷ್ಟನಾಗ ಲಾರನು. ನಾಳೆಗೆ ಬದಲಾಗಿ ನಿನಗೆ ಇಷ್ಟಬಂದಷ್ಟು ವರ್ಷದೊಳಗೆ ಸಾಯುವುದಾದರೂ ಹೀಗೆಯೇ ಹೌದು."

ಸಾವನ್ನು ನೆನೆದು ಇವನು ಬಾಳನ್ನು ಮತ್ತಷ್ಟು ಚೆನ್ನಾಗಿ ಮಾಡಲು ಯತ್ನಿಸುವನು.

"ಬದುಕಿನಲ್ಲಿ ನಿನಗೆ ಉಳಿದಿರುವ ಕಾಲವು ಬಹು ಸ್ವಲ್ಪ. ಗಿರಿಯ ಮೇಲಿರುವನಂತೆ ಬಾಳು. ವಿಶ್ವನಿಯಮಕ್ಕೆ ಅನುಸಾರವಾಗಿ ನಡೆಯು ವವನನ್ನು, ಗುಣದಿಂದ ನಿಜವಾಗಿ ಮಾನವನಾದ ಒಬ್ಬನನ್ನು, ಜನರು ನೋಡಲಿ ಅರಿಯಲಿ.

"ನೀನು ಇಷ್ಟರಲ್ಲೇ ಸಾಯುವೆ. ಆದರೂ ಇನ್ನೂ ಸರಳಹೃದಯ ನಾಗಲಿಲ್ಲ; ಕ್ಷೋಭೆಯಿಂದ ಬಿಡುಗಡೆ ಹೊಂದಲಿಲ್ಲ; ಹೊರಗಣ ಸಂಗತಿ ಗಳಿಂದ ನೊಂದೇನೆಂಬ ಭೀತಿಯಿಂದ ಮುಕ್ತನಾಗಲಿಲ್ಲ. ಸರ್ವರ ವಿಷಯ ದಲ್ಲೂ ದಯಾಪರನಾಗಲಿಲ್ಲ. ಇನ್ನೂ ಧರ್ಮದಲ್ಲಿ ನಡೆಯುವುದೇ ಜ್ಞಾನ ವೆಂದು ನಿಶ್ಚಯಮಾಡಲಿಲ್ಲ."

ಇದು ಎಂಥ ಆತ್ಮಪರೀಕ್ಷೆ, ಎಂಥ ಜೀವನ ವಿಮರ್ಶೆ!

ಮಾರ್ಕಸ್ ಆರೀಲಿಯನನು ತನ್ನ ವಿಷಯದಲ್ಲಿ ಹೇಳಿಕೊಂಡ ಈ ಮಾತೂ ಸುಂದರವಾಗಿದೆ.

"ನೀನು ಇದುವರೆಗೆ ದೇವತೆಗಳ ವಿಷಯದಲ್ಲಿ, ನಿನ್ನನ್ನು ಹೆತ್ತವರ ವಿಷಯದಲ್ಲಿ, ನಿನ್ನ ಒಡಹುಟ್ಟಿದವರ ವಿಷಯದಲ್ಲಿ, ಮಕ್ಕಳು ಗುರುಗಳು, ಚಿಕ್ಕಂದಿನಲ್ಲಿ ನಿನ್ನನ್ನು ಸಾಕಿದವರು, ನಿನ್ನ ಮಿತ್ರರು ನೆಂಟರು ಸೇವಕರ ವಿಷಯದಲ್ಲಿ, ಹೀಗೆ ನಡೆದುಕೊಂಡಿದ್ದೀಯಾ? ಈತನು ಮಾತಿನಿಂದಲಾಗಲಿ ಕಾರ್ಯದಿಂದಲಾಗಲಿ ಒಬ್ಬರಿಗೆ ಅನ್ಯಾಯವನ್ನು ಮಾಡಿದವನಲ್ಲ ಎಂದು ವರ್ಣಿಸುವಂತೆ ನಡೆದುಕೊಂಡಿದ್ದೀಯಾ? ನೋಡು."

ಈ ಮಾತಿನಲ್ಲಿ ಪ್ರಪಂಚದ ವಿಷಯದಲ್ಲಿ ಸಂಪೂರ್ಣವಾದ ಜ್ಞಾನವು ವ್ಯಕ್ತವಾಗಿದೆ.

"ಈಗಣ ಸ್ಥಿತಿಗತಿಗಳನ್ನು ನೋಡಿರುವವನು ಎಲ್ಲವನ್ನೂ ನೋಡಿದ ಹಾಗೆಯೇ. ಹಿಂದೆ ಆದ ಎಲ್ಲವೇ ಮುಂದೆಯೂ ಆಗುವ ಎಲ್ಲವು. ಏಕೆಂದರೆ ಇದೆಲ್ಲಾ ಒಂದೇ ಸಂಬಂಧದ್ದು, ಒಂದೇ ರೂಪಿನದು."

೩

ಎಪಿಕ್ಟಿಟಸನನ್ನು ಕುರಿತ ಉಪನ್ಯಾಸದಲ್ಲಿ ಚಕ್ರವರ್ತಿ ಅವನನ್ನು ಗೌರವಿಸಿದನೆಂದು ಹೇಳಿದೆ. ಮಾರ್ಕಸ್ ಆರೀಲಿಯುಸನೇ ಆ ಚಕ್ರವರ್ತಿ. ತತ್ತ್ವವೆನ್ನುವುದು ಬರಿಯ ಜ್ಞಾನವಲ್ಲ ಅನುಷ್ಠಾನ ಎಂದು ಎಪಿಕ್ಟಿಟಸನು ಹೇಳುತ್ತಿದ್ದನಷ್ಟೆ. ಅವನೇ ಅದನ್ನು ಅಷ್ಟು ಅನುಷ್ಠಿಸಿದನೋ ಇಲ್ಲವೋ ಚರಿತ್ರೆಯಲ್ಲಿ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಅವನು ಅದನ್ನು ಅನುಷ್ಠಿಸಿದ್ದರೂ ಅದು ಅಷ್ಟು ದೊಡ್ಡಮಾತೆಂದು ಜನರು ಒಪ್ಪದೆ ಇರಬಹುದು. ಅಭಾವದಿಂದ ಒಂದು ರೀತಿಯ ವೈರಾಗ್ಯ ಬರುತ್ತದೆ. ಅನೇಕವೇಳೆ ಅದು ನೋಡುವುದಕ್ಕೆ ನಿಜವಾದ ವೈರಾಗ್ಯದಂತೆಯೇ ಇರುತ್ತದೆ. ಆದಕಾರಣ ದರಿದ್ರನ ನಿರಾಶೆ ದುರ್ಬಲನ ತಾಳ್ಮೆಗಳು ಜ್ಞಾನದಿಂದ ಬಂದ ನಿರಾಶೆ ತಾಳ್ಮೆಯೋ ಅಭಾವದ ಫಲವೋ ಹೇಳಲಾಗುವುದಿಲ್ಲ. ಚಕ್ರವರ್ತಿಯಾದ ಮಾರ್ಕಸ್ ಆರೀಲಿಯುಸನಲ್ಲಿ ಕಂಡ ಗುಣಗಳಿಂದ ಎಪಿಕ್ಟಿಟಸನ ಮತದ ಔನ್ನತ್ಯ ಲೋಕಕ್ಕೆ ಪ್ರಕಟವಾಯಿತು. ಚಕ್ರವರ್ತಿಯು ಯಾವ ಭಾವಗಳಿಂದ ತನ್ನ ನಡೆಯನ್ನು ತಿದ್ದಿಕೊಳ್ಳುತ್ತಿದ್ದನೆಂದು ಮೇಲೆ ಉದ್ಧರಿಸಿರುವ ವಾಕ್ಯದಿಂದ ಕಾಣುತ್ತದೆ. ಅವು ಎಪಿಕ್ಟಿಟಸನ ಮಾತುಗಳನ್ನು ಬಹುಮಟ್ಟಿಗೆ ಹೋಲುತ್ತವೆ. ಎಪಿಕ್ಟಿಟಸನ

ಮಾತುಗಳು ಸಭೆಗಳ ಮುಂದೆ ಹೇಳಿದುವು. ಅವುಗಳಲ್ಲಿ ಆ ಹೇಳಿಕೆಯ ರೀತಿ ಕಾಣುತ್ತದೆ. ಮಾರ್ಕಸ್ ಆರೀಲಿಯುಸನ ಮಾತುಗಳು ಕರಡಿನ ಮೇಲೆ ಬರೆದವು. ಇವುಗಳಲ್ಲಿ ಬರೆಹದ ರೀತಿ, ಯೋಚನೆಯ ರೀತಿ ಕಾಣುತ್ತದೆ. ಇಷ್ಟೇ ಇವರಿವರ ಮಾತುಗಳಲ್ಲಿ ತೋರುವ ವ್ಯತ್ಯಾಸ. ಸ್ಟೋೀಯಿಕ್ ತತ್ತ್ವಜ್ಞರು ಸಿದ್ಧಾಂತಮಾಡಿದ ಸೂತ್ರಗಳನ್ನು ಮಾರ್ಕಸ್ ಆರೀಲಿಯುಸನು ತನ್ನ ಜೀವನದಲ್ಲಿ ಉದಾಹರಿಸಿದನು. ಆ ಉದಾಹರಣೆ ಪುಷ್ಟಿಯಾಗುವಂತೆ ತನ್ನ ಮನದ ಭಾವನೆಯನ್ನು ಬರೆದಿಟ್ಟನು. ಚಕ್ರವರ್ತಿಯಾದರೂ ಈತನು ಜ್ಞಾನಿಯಾಗಿದ್ದನು; ಜ್ಞಾನಿಯಾದರೂ ಕಾರ್ಯರಂಗದಲ್ಲಿ ಶ್ರದ್ಧೆಯಿಂದ ನಡೆದನು. ಕಾರ್ಯದಲ್ಲಿ ಇದ್ದರೂ ತನಗೆ ಬಂದು ಫಲ ಬೇಕೆಂದು ಅಪೇಕ್ಷಿಸಲಿಲ್ಲ; ಫಲ ಬೇಡವೆಂದು ಕಾರ್ಯದಲ್ಲಿ ಅಸಡ್ಡೆ ಮಾಡಲಿಲ್ಲ. ಜನರು ತನ್ನಷ್ಟು ಒಳ್ಳೆಯವರಲ್ಲವೆಂದು ಬಲ್ಲನು; ಆದರೆ ಅವರ ವಿಷಯದಲ್ಲಿ ಅಸಹನೆಯನ್ನು ತೋರಲಿಲ್ಲ. ಹೀಗೆ ಗುಣಜ್ಞನಾಗಿ ದೋಷಜ್ಞನಾಗಿ ಸರ್ವಭೂತ ಹಿತದಲ್ಲಿ ನಿರತನಾಗಿ ಈತನು ಸುಖದ ಮಧ್ಯೆ ಋಷಿಕಲ್ಪನಾಗಿ ಬಾಳನ್ನು ನಡೆಯಿಸಿದನು.

ಸುಗ್ರೀವನಿಗೂ ವಾಲಿಗೂ ಜಗಳ ಬಂದು ವಾಲಿ ತಮ್ಮನ ಮೇಲೆ ಕೋಪದಿಂದ ಅವನನ್ನು ಶಿಕ್ಷಿಸಬೇಕೆಂದು ಹಿಂದಟ್ಟಿ ಬಂದಾಗ ಸುಗ್ರೀವನು ಕಿಷ್ಕಿಂಧೆಯಿಂದ ಹೊರಟು ಉತ್ತರದೇಶ ಪೂರ್ವ ದ್ವೀಪಗಳು ಪಶ್ಚಿಮ ದ್ವೀಪಗಳು ದಕ್ಷಿಣ ಪ್ರಾಂತಗಳು ಎಲ್ಲವನ್ನೂ ಸುತ್ತಿದನಂತೆ. ಅಲ್ಲೆಲ್ಲ ವಾಲಿ ಅಟ್ಟಿಕೊಂಡು ಬಂದನು. ಎಲ್ಲೆಲ್ಲಿಯೂ ಕ್ಷೇಮವನ್ನು ಕಾಣದೆ ಸುಗ್ರೀವನು ಕೊನೆಗೆ ಕಿಷ್ಕಿಂಧೆಯ ಪಕ್ಕದಲ್ಲೇ ಇದ್ದ ಒಂದು ಗಿರಿಯನ್ನು ಸೇರಿ ಸುರಕ್ಷಿತನಾದನು. ಮತಂಗ ಋಷಿಯ ಮಹಿಮೆಯಿಂದ ಅಲ್ಲಿ ವಾಲಿಗೆ ಪ್ರವೇಶವಿರಲಿಲ್ಲ. ಇಂದ್ರಿಯಗಳ ಧೂರ್ತತೆಯಿಂದ ಭಯಗೊಂಡು ಹೊರಗಣ ವಸ್ತುಗಳನ್ನಾಶ್ರಯಿಸಿ ಅವುಗಳ ಹಿಂಸೆಗಳನ್ನು ತಪ್ಪಿಸಿಕೊಳ್ಳಬೇಕೆನ್ನುವ ಮನುಷ್ಯನು ದೇಶದೇಶ ಸುತ್ತಿದ ಸುಗ್ರೀವನಂತೆ ನಿರಾಶನಾಗಬೇಕಾಗುತ್ತದೆ. ಸುರಕ್ಷಿತನಾಗಬೇಕಾದರೆ ಮನುಷ್ಯನು ತನ್ನಲ್ಲಿಯೇ ಇರುವ ಬುದ್ಧಿಯಲ್ಲಿ ನಿಲ್ಲಬೇಕು. ಅದನ್ನಾಶ್ರಯಿಸಿದವನಿಗೆ ಇನ್ನು ಇಂದ್ರಿಯಗಳ ಕೋಟಲೆಯಿಲ್ಲ, ಸುಖದುಃಖಗಳ ಭಯವಿಲ್ಲ;

ಮಾನಾಪಮಾನ ಜಯಾಪಜಯ ಆಗುಹೋಗುಗಳ ಶಂಕೆಯಿಲ್ಲ. ಬುದ್ಧಿ ಮಾನವನ ಆತ್ಮರಾಜ್ಯಕ್ಕೆ ಅಂತರಾಷ್ಟ್ರದ ಮೂಲಬಲ, ಅಭೇದ್ಯವಾದ ದುರ್ಗ. ಇದನ್ನು ತಿಳಿಯುವುದಕ್ಕೆ ಮನುಷ್ಯನಿಗೆ ಬಹಳ ಕಾಲ ಬೇಕಾಗುತ್ತದೆ. ತಿಳಿದಮೇಲೂ ತಿಳಿವಿನಂತೆ ನಡೆಯುವುದು ಕಷ್ಟಸಾಧ್ಯ. ಮಾರ್ಕಸ್ ಆರೀಲಿಯುಸನು ಇದನ್ನು ತಿಳಿದವರಲ್ಲಿ ಮತ್ತು ತಿಳಿವಿಗೆ ಅನುಸಾರವಾಗಿ ನಡೆದವರಲ್ಲಿ ಪ್ರಮುಖನು. ಈ ತಿಳಿವು ಈ ನಡೆಯಿಂದ ಈತನು ಮಾನವ ಜನ್ಮದಲ್ಲಿ ದೇವತ್ವವನ್ನು ಸಾಧಿಸಿದನು.

---

# ಅಗಸ್ಟೀನ್ ಸಾಧುವಿನ ಬಿನ್ನಪ

೧

ಯೇಸೂ ಕ್ರಿಸ್ತ ಮಹಾಗುರು ಮಾಡಿದ ಉಪದೇಶವು ಆರಂಭದಲ್ಲಿ ಈಗ ನಮಗೆ ಕಾಣುತ್ತಿರುವ ಹಿರಿಯ ಮತವಾಗಿರಲಿಲ್ಲ. ಆ ಮಹಾಪುರುಷನಿಗೆ ಜನ್ಮವನ್ನಿತ್ತ ಯೇಹೂದ್ಯ ಜನಾಂಗವೇ ಮೊದಲು ಅದನ್ನು ಒಪ್ಪಲಿಲ್ಲ. ಆ ಜನರ ಪ್ರಮುಖರಿಗೆ ಡೇವಿಡನ ಕೀರ್ತನೆಗಳು, ಸಾಲೊಮನ್ನನ ಜ್ಞಾನ ಭಂಡಾರ, ಅವರ ಆರ್ಯರ ಜೀವನದಲ್ಲಿ ದೇವರು ಪ್ರತ್ಯಕ್ಷನಾಗಿದ್ದನೆಂಬ ನೆನಪು, ಇವುಗಳ ಹೆಮ್ಮೆಯಲ್ಲಿ ಶಿಲುಬೆಯಮೇಲೆ ಸತ್ತ ಈ ಬಡಪಾಯಿ ಒಬ್ಬ ಗುರುವೆಂದು ಕಾಣಲಿಲ್ಲ. ಆತನ ಉಪದೇಶವನ್ನು ಕೇಳಿ ಶಿಷ್ಯರಾಗಿದ್ದ ಕೆಲವರು ಮಾತ್ರ ಆತನು ಎಷ್ಟು ಹಿರಿಯನೆಂಬುದನ್ನು ತಿಳಿದಿದ್ದರು. ಅವರು ಕಣ್ಣಾರೆ ಕಂಡ ಆ ದೈವೀಶಕ್ತಿಯ ನೆನವಿನಿಂದ ಅವರು ತಮ್ಮ ಗುರುವಿನ ಮತವನ್ನು ಲೋಕದಗಲ ಹರಡುವ ಕೆಲಸದಲ್ಲಿ ಪ್ರವರ್ತಿಸಿದರು. ಮಾರ್ಕಸ್ ಆರೀಲಿಯಸನ ಕಾಲದಲ್ಲಿ ಪಶ್ಚಿಮ ದೇಶದ ಜನರು ಅದನ್ನು ಕೊಂಚ ಕೊಂಚವಾಗಿ ಸ್ವೀಕರಿಸಿದರು; ಅವರಲ್ಲಿ ತಿಳಿದವರೂ ಶಕ್ತರೂ ಅದನ್ನು ಅನುಷ್ಠಾನಕ್ಕೆ ತಂದು, ಕ್ರಿಸ್ತನ ರಕ್ತದಿಂದ ಬೆಳೆದ ಧರ್ಮಕ್ಕೆ ತಮ್ಮ ಜೀವನವನ್ನು ಧಾರೆಯೆರೆದ ಮೇಲೆ ಅದು ವಿಸ್ತಾರವಾಯಿತು. ಕ್ರಿಸ್ತ ಧರ್ಮದ ಬೆಳೆವಣಿಗೆಗೆ ಹೀಗೆ ಸಹಾಯರಾದವರಲ್ಲಿ ಈ ಆರಂಭದ ಶತಮಾನಗಳಲ್ಲಿ ಬಂದ ಸಾಧು ಅಗಸ್ಟೀನ್ ಎನ್ನುವವನು ಒಬ್ಬ ಪ್ರಮುಖನು.

ಅಗಸ್ಟೀನನು ಹುಟ್ಟಿದ್ದು ಆಫ್ರಿಕಾದಲ್ಲಿ. ಕ್ರಿಸ್ತ ಮತ ಆಗ್ಯೆ ಯೂರೋಪಿನಿಂದ ಇವರ ಸೀಮೆಗೆ ಬಂದಿತ್ತು. ಕೆಲವರು ಹೊಸ ಮತವನ್ನು ಅವಲಂಬಿಸಿದ್ದರು; ಕೆಲವರು ಹಿಂದಿನ ಮತದಲ್ಲಿಯೇ ಇದ್ದರು. ಒಂದು ಸಂಸಾರದಲ್ಲಿ ಕೆಲವರು ಹೀಗೆ ಕೆಲವರು ಹಾಗೆ ಇದ್ದದ್ದೂ ಕೂಡ ಉಂಟು. ಇವನು ಹುಟ್ಟಿದ ಸಂಸಾರ ಅಂಥದು. ಇವನ ತಂದೆ ಪೂರ್ವ ಮತದಂತೆ ಇದ್ದನು; ತಾಯಿ ಕ್ರಿಸ್ತ ಭಕ್ತಳು. ತಾಯ ಇಚ್ಛೆಯಂತೆ

ಮಗುವಿಗೆ ಹೊಸ ಮತದ ಉಪದೇಶವೇ ಆಯಿತು; ಆದರೆ ಬದುಕು ಕ್ರೈಸ್ತನ ಬದುಕಾಗಿರಲಿಲ್ಲ. ಇವನು ಕಾರ್ಥೇಜಿನಲ್ಲಿ ಓದಿ, ಪಂಡಿತನಾಗ ಬೇಕೆಂದು ರೋಮ್ ಮಿಲಾನ್ ನಗರಗಳಿಗೆ ಬಂದು ಪಂಡಿತರ ಮಧ್ಯೆ ಓಡಿಯಾಡಿ ವಾದ ವಿವಾದಗಳಲ್ಲಿ ಸೇರಿ ಈ ನಡುವೆ ವಿಷಯಲಾಲಸನಾಗಿ ಹಲವು ವರ್ಷಗಳನ್ನು ಕಳೆದನು. ಇವನ ತಾಯಿ ಇವನು ಕೆಡುತ್ತಿದಾನಲ್ಲಾ ಎಂದು ವ್ಯಥೆಪಡುತ್ತಾ, ದೇವರೇ ಇವನನ್ನು ಕಾಪಾಡು ಇವನನ್ನು ಉದ್ಧಾರಮಾಡು ಎಂದು ದೇವರನ್ನು ಪ್ರಾರ್ಥಿಸುತ್ತಾ, ಇವನಿರುವ ಕಡೆಗೆ ಬಂದು ಇವನ ಜೊತೆಯಲ್ಲಿದ್ದು ಕೊನೆಗೆ ಇವನ ಬುದ್ಧಿ ಸರಿಯಾಗಿ ಇವನು ಕ್ರೈಸ್ತನಾದುದನ್ನು ಕಂಡಳು. ಇನ್ನು ತನ್ನ ಆಸೆ ಪೂರ್ತಿಯಾಯಿತೆಂದು ಸಮಾಧಾನವಾಗಿ ಜೀವವನ್ನು ಬಿಟ್ಟಳು. ಕ್ರೈಸ್ತನಾದ ಅಗಸ್ಟೀನನು ಉಪದೇಶಕನಾಗಿ ಆಂಬ್ರೋಸ್ ಎಂಬ ತನ್ನ ಗುರುವಿನೊಂದಿಗೆ ಹಲವು ಗ್ರಂಥಗಳನ್ನು ರಚಿಸಿದನು. ತನ್ನ ಸೀಮೆಯ ಒಂದು ಗುರುಪೀಠದ ಗುರು ವಾಗಿ ಹೋಗಿ ಅಲ್ಲಿ ಮುದುಕನಾಗುವವರೆಗೆ ಪೀಠವನ್ನಲಂಕರಿಸಿ ಗ್ರಂಥ ಗಳನ್ನು ಬರೆದು ಕ್ರೈಸ್ತ ಮತವನ್ನು ಹರಡಿ ಕೊನೆಗೆ ತೃಪ್ತಿಯಿಂದ ಜೀವ ವನ್ನು ಬಿಟ್ಟನು.

ಈತನು ಬರೆದ ಗ್ರಂಥಗಳಲ್ಲಿ ಇವನ ಜೀವನ ಚರಿತೆ ಒಂದು. ಇದರಲ್ಲಿ ಈತನು ತಾನು ಆರಂಭದಲ್ಲಿದ್ದ ರೀತಿಯನ್ನೂ ತನಗೆ ದೇವರ ಕಡೆ ಮನಸ್ಸು ತಿರುಗಿದ್ದು ಹೇಗೆ ಎಂಬುದನ್ನೂ ವಿವರಿಸಿನಾನೆ. ತನ್ನ ಅನುಭವ ದಿಂದ ಇತರರಿಗೆ ಪ್ರಯೋಜನವಾಗಲೆಂದು ಬರೆದ ಗ್ರಂಥವಾದದ್ದರಿಂದ ಇದರಲ್ಲಿ ಆ ಅನುಭವವನ್ನು ಸತ್ಯವಾಗಿ ಬರೆದಿದಾನೆ. ಮುಕ್ತನಾದ ಮೇಲೆ ಬರೆದ ಗ್ರಂಥವಾದದ್ದರಿಂದ ಇದರಲ್ಲಿ ಮೊದಲಣ ಆ ಬದ್ಧ ಜೀವನ ವನ್ನು ಸಂಕೋಚವಿಲ್ಲದೆ ವರ್ಣಿಸಿದ್ದಾನೆ. ಇವನಿಗೆ ಸಾಹಿತ್ಯ ಶಾಸ್ತ್ರಗಳಲ್ಲಿ ಅಸಾಧಾರಣ ಸಾಮರ್ಥ್ಯವಿದ್ದಕಾರಣ ಈ ಗ್ರಂಥವು ಓದುವುದಕ್ಕೆ ಹಿತ ವಾಗಿಯೂ ರುಚಿಯಾಗಿಯೂ ಇದೆ. ನಡೆದ ವಿಷಯಗಳನ್ನು ಹೇಳುವುದ ರಲ್ಲಿ ಈತನು ಮಧ್ಯೆಮಧ್ಯೆ ತನ್ನ ಜ್ಞಾನದ ಸ್ಥಿತಿಯ ಟೀಕೆಯನ್ನು ಮಾಡು ತ್ತಾನೆ. ಇದರಲ್ಲಿ ತನ್ನ ತಪ್ಪನ್ನು ಕುರಿತ ತೀವ್ರವಾದ ಪಶ್ಚಾತ್ತಾಪ, ದೇವರು ರಕ್ಷಿಸಿದಾನೆಂಬ ದೃಢವಾದ ನಂಬಿಕೆ, ರಕ್ಷಿಸಿದ ಆ ಪರಮಾತ್ಮನ

ವಿಷಯದಲ್ಲಿ ಗಾಢವಾದ ಭಕ್ತಿ, ಇವೆಲ್ಲ ವ್ಯಕ್ತವಾಗುತ್ತವೆ. ಈ ಕಾರಣ ದಿಂದ ಮತವಿಷಯದ್ವೆನ್ನಬಹುದಾದ ಈ ಚರಿತೆಯು ಒಳ್ಳೆಯ ಕತೆಯಂತೆ ಮನಮೋಹಕವಾಗಿದೆ. ಈ ಉತ್ತಮ ಜೀವನದ ಕತೆ ತಿಳಿಯುವಂತೆ ಈ ಉಪನ್ಯಾಸದಲ್ಲಿ ಅದರಿಂದ ಕೆಲವು ಭಾಗಗಳನ್ನು ಎತ್ತಿ ಬರೆದಿದೆ.

೨

ಇದು ಈತನು ತನ್ನ ಬಾಲ್ಯದ ವಿಷಯದಲ್ಲಿ ಹೇಳಿರುವ ಮಾತು.

"ನಾನು ಈ ಮೃತಜೀವನಕ್ಕೆ ಅಥವಾ ಜೀವನ್ಮೃತಿಗೆ ಎಲ್ಲಿಂದ ಬಂದೆನೋ ಅರಿಯೆನು. ನಾನು ಬಂದೊಡನೆಯೇ ನಿನ್ನ ಕನಿಕರವು ಒದಗಿಸಿದ್ದ ಸೌಖ್ಯಗಳು ನನ್ನ ಕೈಯನ್ನು ಹಿಡಿದುವು. ನನಗೆ ತಾಯಿ ಮತ್ತು ದಾದಿಯರ ಹಾಲು ಸಿದ್ಧವಾಯಿತು. ನನ್ನ ತಾಯಿಯಾಗಲಿ, ದಾದಿಯಾಗಲಿ ನನ್ನ ಪೋಷಣೆಗಾಗಿ ತಮ್ಮ ಸ್ತನಗಳಲ್ಲಿ ಹಾಲನ್ನು ತಾವು ತುಂಬಿಕೊಳ್ಳಲಿಲ್ಲ. ನೀನು ನಿನ್ನ ನಿಯಮಕ್ಕನುಸಾರವಾಗಿ ನನ್ನ ಬಾಲ್ಯದ ಆಹಾರವನ್ನು ಅಲ್ಲಿ ಇಟ್ಟೆ. ಹೀಗೆ ನಿನ್ನ ಐಶ್ವರ್ಯವನ್ನು ಎಲ್ಲ ವಸ್ತುಗಳ ಮೂಲದಲ್ಲಿ ಅವಿತಿಟ್ಟು ನೀನು ಹರಡುತ್ತೀಯೆ. ನೀನು ಕೊಡುವಷ್ಟು ಹೊರತು ಹೆಚ್ಚನ್ನು ಅಪೇಕ್ಷಿಸದಂತೆ ನನ್ನನ್ನು ಮಾಡಿದೆ. ದಾದಿಯರು ನೀನು ಅವರಲ್ಲಿಟ್ಟ ಹಾಲನ್ನು ನನಗೆ ಸಂತೋಷದಿಂದ ಕೊಡುವಂತೆ ಅವರಿಗೆ ಮನಸ್ಸನ್ನು ಕೊಟ್ಟೆ. ಅವರು ನಿಸರ್ಗವಾದ ಪ್ರೇಮದಿಂದ ಅವರಲ್ಲಿ ತುಂಬಿದ್ದುದನ್ನು ನನಗೆ ಕೊಟ್ಟರು. ನನಗೆ ಅವರಿಂದ ಬಂದ ಒಳ್ಳೆಯದು ಅವರಿಗೂ ಒಳ್ಳೆಯದಾಗಿತ್ತು. ಇಷ್ಟಕ್ಕೆ ಅದು ಅವರಿಂದ ಬಂದದ್ದು ಎನ್ನುವುದೂ ಸರಿಯಲ್ಲ. ಅದು ಅವರ ಮೂಲಕ ಬಂದದ್ದು. ಏಕೆಂದರೆ ದೇವ, ಎಲ್ಲ ಒಳ್ಳೆಯದೂ ನಿನ್ನಿಂದ ಬರತಕ್ಕದ್ದೇ. ನನ್ನ ಆರೋಗ್ಯವೆಲ್ಲ ನನ್ನ ದೇವರಿಂದ ಬಂದದ್ದು. ಇದನ್ನು ನಾನು ಈಚೆಗೆ ತಿಳಿದೆನು. ಈ ಎಲ್ಲ ಆಂತರಿಕವಾದ ಬಾಹ್ಯವಾದ ಸಹಾಯಗಳಿಂದ ನೀನು ನನಗೆ ಪ್ರಕಾಶ ಗೊಂಡೆ. ಆಗ ಮೊಲೆ ಕುಡಿಯುವುದನ್ನು ಮಾತ್ರ ನಾನು ಬಲ್ಲೆ. ದೇಹ ಸುಖವಾಗಿದ್ದರೆ ಸಮಾಧಾನವಾಗಿರುವುದು; ದೇಹ ನೊಂದರೆ ಅಳುವುದು; ಇಷ್ಟು ಮಾತ್ರ ನನಗೆ ತಿಳಿದಿತ್ತು, ಇನ್ನೇನೂ ತಿಳಿಯದು.

"ಈಗ ನೋಡು, ನನ್ನ ಬಾಲ್ಯವು ಮುಗಿದು ಬಹು ದಿನವಾಯಿತು. ನಾನು ಜೀವಂತನಾಗಿದ್ದೇನೆ. ನೀನಾದರೋ ಆದ್ಯಂತರಹಿತನಾಗಿ ಇರುವವನು, ನಿನ್ನಲ್ಲಿ ಯಾವುದೂ ನಾಶವಾಗುವುದಿಲ್ಲ. ಸೃಷ್ಟಿಯ ಆರಂಭ ಎಲ್ಲಕ್ಕೂ ಮೊದಲು ಎಂದು ಹೇಳುವ ಎಲ್ಲಕ್ಕೂ ಆರಂಭವೆನಿಸಿ ಮೊದಲು ಆಗಿ ನೀನಿದ್ದೀಯೆ. ನೀನು ಸೃಷ್ಟಿಸಿರುವ ಎಲ್ಲಕ್ಕೂ ನೀನು ದೈವ, ನೀನು ಒಡೆಯ. ಅಶಾಶ್ವತವಾದ ಈ ಎಲ್ಲ ವಸ್ತುಗಳ ಆರಂಭಗಳು ನಿನ್ನಲ್ಲಿ ಶಾಶ್ವತವಾಗಿ ನಿಂತಿವೆ. ವಿಕಾರವುಳ್ಳ ಸಮಸ್ತ ವಸ್ತುಗಳ ಮೂಲಗಳು ಅವಿಕೃತವಾಗಿ ನಿನ್ನಲ್ಲಿ ವಾಸಿಸುತ್ತವೆ. ಕಾರಣಸಿದ್ಧವಲ್ಲದ ಮತ್ತು ಕಾಲನಿಗೆ ಒಳಪಟ್ಟ ಎಲ್ಲ ವಸ್ತುಗಳ ಆದ್ಯಂತರಹಿತವಾದ ಕಾರಣಗಳು ನಿನ್ನಲ್ಲಿ ಜೀವಿಸಿವೆ. ದೇವರೇ, ನಿನ್ನನ್ನು ಕೇಳುವ ನನಗೆ ಹೇಳು: ಓ ದಯಾಳುವೇ, ನಿನ್ನ ದಯೆಗೆ ಅರ್ಹನಾದ ನನಗೆ ತಿಳಿಸು. ನನ್ನ ಬಾಲ್ಯವು ಅದರ ಹಿಂದೆ ಮುಗಿದ ಒಂದು ವಯಸ್ಸಿನ ಅನಂತರ ಬಂತೊ? ನಾನು ನನ್ನ ತಾಯ ಗರ್ಭದಲ್ಲಿ ಕಳೆದ ಕಾಲವು ಅದೇಯೊ? ನಾನು ಈ ವಿಚಾರವನ್ನು ಸ್ವಲ್ಪ ಕೇಳಿದ್ದೇನೆ. ತಾಯ ಗರ್ಭದ ಆ ಜೀವನವು ಆರಂಭವಾಗುವುದಕ್ಕೆ ಮೊದಲು ಓ ಆನಂದಮೂರುತಿ, ನಾನು ಎಲ್ಲಿಯಾದರೂ ಇದ್ದೆನೊ? ಯಾರಾದರೂ ಆಗಿದ್ದೆನೋ? ಇದನ್ನು ನನಗೆ ಹೇಳುವವರು ಯಾರೂ ಇಲ್ಲ. ಇದನ್ನು ತಂದೆತಾಯಿಗಳು ಹೇಳಲಾರರು. ಯಾರಿಗೂ ಇದರ ಅನುಭವವಿಲ್ಲ. ನನಗೂ ಇದರ ಜ್ಞಾಪಕವಿಲ್ಲ. ಇದನ್ನು ನಾನು ಕೇಳಿದುದಕ್ಕೆ ನೀನು ನನ್ನನ್ನು ನೋಡಿ ನಗುವೆಯಾ? ನನಗೆ ತಿಳಿದುದೆಂಬ ಕಾರಣದಿಂದ ನಿನ್ನನ್ನು ಸ್ತೋತ್ರಮಾಡಿ ನಿನ್ನ ಹಿರಿಮೆಯನ್ನು ಒಪ್ಪಿಕೋ ಎನ್ನುವೆಯಾ?

"ಭೂಲೋಕ ಸ್ವರ್ಗಲೋಕಗಳ ಸಾಮ್ರಾಜ್ಯ ಅಧಿನಾಯಕನೆಂದು ನಿನ್ನನ್ನು ನಾನು ಒಪ್ಪುತ್ತೇನೆ. ನನ್ನ ಬದುಕಿನ ಆರಂಭದ ದೆಸೆಗಳಿಗಾಗಿ ನನ್ನ ಬಾಲ್ಯಕ್ಕಾಗಿ ನಿನ್ನನ್ನು ಸ್ತೋತ್ರಮಾಡುತ್ತೇನೆ. ನನಗೆ ಇವುಗಳ ನೆನಪು ಇಲ್ಲ. ಆದರೆ ನೀನು ಮನುಷ್ಯನನ್ನು ಇತರರ ಮಾತಿನಿಂದ ತನ್ನನ್ನು ಕುರಿತ ಬಹು ವಿಷಯವನ್ನು ಊಹಿಸಿಕೊಳ್ಳುವ ಸ್ಥಿತಿಯಲ್ಲಿ ಇಟ್ಟಿದ್ದೀಯೆ. ಬಾಲ್ಯದ ಕೊನೆಯಲ್ಲಿ ಸಂಜ್ಞೆಗಳಿಂದ ನನ್ನ ಭಾವಗಳನ್ನು ಇತರರಿಗೆ ತಿಳಿಸಬಲ್ಲೆನಾದೆನು; ಇತರರಿಂದ ಸಂಜ್ಞೆಗಳನ್ನು ನಿರೀಕ್ಷಿಸುತ್ತಿದ್ದೆನು. ನನ್ನೊಡೆಯ,

ನಿನ್ನಿಂದ ಅಲ್ಲದೆ ಇಂಥ ಜೀವ ಬೇರೆ ಎಲ್ಲಿಂದ ಬರಬಹುದು? ಯಾವ ಜೀವವಾಗಲಿ ತನ್ನನ್ನು ತಾನೇ ಮಾಡಿಕೊಳ್ಳಬಲ್ಲುದೇ? ಅಥವಾ ದ್ರವ್ಯವೂ ಜೀವವೂ ಒಂದಾಗಿರುವ ನಿನ್ನಿಂದ ಅಲ್ಲದೆ ದ್ರವ್ಯವನ್ನೋ ಜೀವವನ್ನೋ ನಮ್ಮೊಳಗೆ ಹರಿಯಿಸುವ ನಾಳವು ಬೇರೆ ಎಲ್ಲಿಂದಾದರೂ ಉದಯಿಸಬಹುದೇ? ನೀನೇ ಪರದ್ರವ್ಯ, ನೀನೇ ಪರಜೀವ, ನೀನು ಅತ್ಯುನ್ನತನು, ಅವಿಕಾರನು. ನಿನ್ನಲ್ಲಿ ಇಂದು ಎನ್ನುವುದು ಮುಗಿಯುವುದಿಲ್ಲ, ಅಥವಾ ಅದು ಮುಗಿಯು ವುದೆನ್ನುವುದು ನಿನ್ನಲ್ಲಿಯೇ. ಏಕೆಂದರೆ ಇಂದು ಎಲ್ಲ ಕೂಡಿ ನಿನ್ನಲ್ಲಿವೆ. ನೀನು ಉದ್ಧರಿಸದಿದ್ದರೆ ಅವು ಮುಗಿಯುವುದಕ್ಕೆ ದಾರಿಯುರಿಯವು. ನಿನ್ನ ಕಾಲಕ್ಕೆ ಕೊನೆಯಿಲ್ಲವಾದುದರಿಂದ ನಿನ್ನ ಕಾಲವೆಲ್ಲ ಒಟ್ಟುಗೂಡಿ ನಿನಗೆ ಒಂದು ಇಂದು ಆಗಿದೆ. ನಮ್ಮ ಮತ್ತು ನಮ್ಮ ಪಿತೃಪಿತಾಮಹರ ಎಷ್ಟೋ ವರ್ಷಗಳು ನಿನ್ನ ಇಂದಿನಲ್ಲಿ ಹರಿದೋಡಿ, ಆ ಇಂದಿನಿಂದ ತಮ್ಮ ಇರವಿನ ತತ್ತ್ವವನ್ನೂ ಆಕಾರವನ್ನೂ ಪಡೆದವು! ಹೀಗೆಯೇ ಇನ್ನೂ ಸಂವತ್ಸರಗಳು ಹರಿದೋಡುವುವು; ಹೀಗೆಯೇ ತಮ್ಮ ಇರವಿನ ಆಕಾರವನ್ನು ಪಡೆಯುವುವು; ನೀನು ಮಾತ್ರ ಅವಿಕೃತನಾಗಿ ನಾಳೆಯ ಮತ್ತು ಅದರಾಚೆಯ ಕಾಲದ ನಿನ್ನೆಯ ಮತ್ತು ಅದರ ಹಿಂದಿನ ಕಾಲದ ಎಲ್ಲ ವಸ್ತುಗಳನ್ನೂ ಇಂದೇ ಮಾಡುತ್ತೀಯೆ.''

ಬಾಲ್ಯದ ತನ್ನ ಕ್ರೀಸ್ತ ದೀಕ್ಷೆಯ ವಿಷಯವಾಗಿ ಈತನು ಹೀಗೆ ಹೇಳಿದ್ದಾನೆ.

‘‘ಹುಡುಗನಾಗಿದ್ದಾಗಲೇ ನಾನು ಮುಕ್ತಿಯ ವಿಷಯವನ್ನು ಕೇಳಿ ಬಲ್ಲೆನು. ಕ್ರೀಸ್ತನು ನಮಗಾಗಿ ಮನುಷ್ಯನಾದ ಮಾತನ್ನು ತಿಳಿದಿದ್ದೆನು. ನಿನ್ನಲ್ಲಿ ನನ್ನ ತಾಯಿಗೆ ಭಕ್ತಿಯಿದ್ದ ಕಾರಣದಿಂದ ನಾನು ಗರ್ಭದಲ್ಲಿರು ವಾಗಲೇ ನನಗೆ ಕ್ರೀಸ್ತನ ಶಿಲುಬೆಯ ಚಿಹ್ನೆಯನ್ನು ಹಾಕಿಸಿದರು. ಅವನ ಉಪ್ಪಿನಿಂದ ನಮಗೆ ಸಂಸ್ಕಾರ ಮಾಡಿದರು. ನಾನು ಸಣ್ಣವನಾಗಿರು ವಾಗಲೆ ಒಂದು ಸಲ ಹೊಟ್ಟೆ ಉಬ್ಬರವಾಗಿ ಸಾಯುವಂತಿರಲಾಗಿ ನಾನು ನಮ್ಮ ತಾಯ ಭಕ್ತಿಯುಕ್ತವಾದ ಎಚ್ಚರಿಕೆಯಿಂದ ನಮ್ಮೆಲ್ಲರ ತಾಯಾದ ಚರ್ಚಿನ ಸಹಾಯದಿಂದ ದೀಕ್ಷೆಯನ್ನು ಎಷ್ಟು ಆತುರದಿಂದ ಬೇಡಿದೆನೆಂಬು ದನ್ನು ನೀನು ಬಲ್ಲೆ. ನನಗೆ ದೇಹವನ್ನು ಕೊಟ್ಟ ನನ್ನ ತಾಯಿ ಆ

ದೇಹವನ್ನು ಕೊಡಲೆಂದು ಪಟ್ಟ ಕಷ್ಟಕ್ಕಿಂತಲೂ ಹೆಚ್ಚಾದ ಕಷ್ಟವನ್ನು ನನ್ನ ಆತ್ಮಕ್ಕಾಗಿ ಅನುಭವಿಸುವುದಕ್ಕೆ ಸಿದ್ಧಳಾಗಿದ್ದಳು; ನನಗೆ ವಾಸಿಯಾಗದೆ ಇದ್ದಿದ್ದರೆ ದೀಕ್ಷೆಯ ಸಂಸ್ಕಾರಗಳನ್ನು ಮುಗಿಯಿಸುತ್ತಿದ್ದಳು. ಆದರೆ ಆರೋಗ್ಯವಾದದ್ದರಿಂದ ದೀಕ್ಷೆಯಿಂದ ಶುದ್ಧನಾದರೂ ಬದುಕಿನಲ್ಲಿ ಮತ್ತೆ ಅಶುದ್ಧನಾದೇನೆಂಬ ಕಾರಣದಿಂದಲೆಂಬಂತೆ ದೀಕ್ಷೆಯ ಗಡುವನ್ನು ಮುಂದಕ್ಕೆ ನೂಕಿದರು. ನನಗೆ ಆಗಲೇ ಸ್ವಲ್ಪ ನಂಬಿಕೆಯುಂಟು. ನಮ್ಮ ತಾಯೂ ನಮ್ಮ ಸಂಸಾರದಲ್ಲಿ ನಮ್ಮ ತಂದೆಯ ಹೊರತು ಉಳಿದವರೆಲ್ಲರೂ ನಂಬಿಕೆಯುಳ್ಳವರು. ತಾನು ನಂಬದಿದ್ದರೂ ಆ ಕಾರಣದಿಂದ ನಾನೂ ನಂಬದಿರುವನಾಗಬೇಕೆಂದು ನಮ್ಮ ತಂದೆಯು ಅಡ್ಡಿಬಂದು ಹಠಮಾಡಲಿಲ್ಲ. ಆ ತಂದೆಗಿಂತಲೂ ಹೆಚ್ಚಾಗಿ ನೀನು ನನ್ನ ತಂದೆಯಾಗಬೇಕೆಂದು ನಮ್ಮ ತಾಯ ಆಶೆ. ತಾನು ಒಳ್ಳೆಯವಳಾದರೂ ತನ್ನಷ್ಟು ಒಳ್ಳೆಯವನಲ್ಲದ ನಮ್ಮ ತಂದೆಗೆ ಅವಳು ವಿಧೇಯಳಾಗಿರುತ್ತಿದ್ದಳು. ಆ ವಿಧೇಯತೆಯು ನಿನ್ನ ವಿಷಯದಲ್ಲಿ ತೋರಿಸಿದ್ದು. ಏಕೆಂದರೆ, ಹೆಂಡತಿ ಗಂಡನ ಇಷ್ಟದಂತೆ ನಡೆದುಕೊಳ್ಳಬೇಕೆನ್ನುವುದು ನಿನ್ನ ಆಜ್ಞೆ. ಆದರೂ ಈ ಸಂದರ್ಭದಲ್ಲಿ ಇವಳ ಇಷ್ಟದಂತೆ ಅವನೂ ನಡೆದುಕೊಳ್ಳುವುದಕ್ಕೆ ನೀನು ಅವನಿಗೆ ಸಹಾಯ ಮಾಡಿದೆ.''

ಎಲ್ಲ ಹುಡುಗರಂತೆ ಈತನೂ ಆಟದಲ್ಲಿ ಹೆಚ್ಚು ಆಶೆ, ಓದುಬರಹದಲ್ಲಿ ಅಸಡ್ಡೆವುಳ್ಳವನಾಗಿದ್ದನೆಂದು ಕಾಣುತ್ತದೆ. ವಯಸ್ಸಾದಮೇಲೆ ಬಾಲ್ಯದ ತನ್ನ ತಪ್ಪು ಬಹಳ ಹಿರಿದೆಂದು ಇವನಿಗೆ ಕಂಡಿತು.

"ನಾನು ನಿನ್ನಲ್ಲಿ ಇದನ್ನೆಲ್ಲ ಒಪ್ಪಿಕೊಳ್ಳುತ್ತಿದ್ದೇನೆ. ನನ್ನ ದೇವರೆ, ಅನೇಕ ಸುಳ್ಳುಗಳನ್ನು ಹೇಳಿ ನನ್ನ ಉಪಾಧ್ಯಾಯರಾದ ಗುರುಗಳನ್ನೂ ತಾಯಿತಂದೆಗಳನ್ನೂ ಮೋಸಗೊಳಿಸಿದೆನು. ಆಟದ ಆಶೆಯಿಂದ ತಮಾಷೆಯನ್ನು ನೋಡಬೇಕೆಂಬ ಆತುರದಿಂದ ನೋಡಿದುದನ್ನು ನಾನು ಮಾಡಬೇಕೆಂಬ ಚಪಲದಿಂದ ನಮ್ಮ ತಾಯಿತಂದೆಗಳ ಗೂಡು ಗುಡಾಣಗಳಿಂದ ಕಳವುಮಾಡಿದೆನು. ಇದನ್ನು ಮಾಡಿದ್ದು ತಿಂಡಿಪೋತತನದಿಂದ ಅಥವಾ ಇತರ ಹುಡುಗರಿಗೆ ಕೊಡುವುದಕ್ಕಾಗಿ. ಈ ತಿಂಡಿಗಾಗಿ ಅವರು ತಮ್ಮ ಆಟದ ಸರತಿಗಳನ್ನು ನನಗೆ ಕೊಡುತ್ತಿದ್ದರು. ಆಟದಲ್ಲಿ ಕೂಡ ನಾನು ಅನೇಕ

ವೇಳೆ ಅನ್ಯಾಯದಿಂದ ಗೆಲ್ಲುವ ಯತ್ನಮಾಡಿದೆನು. ಇತರರನ್ನು ಸೋಲಿಸಬೇಕೆಂಬ ಮುಂದಾಳಾಗಬೇಕೆಂಬ ವೃಥಾ ಅಪೇಕ್ಷೆಯಿಂದ ನಡೆದೆನು. ಆ ಮೊದಲು ನಾನೇ ಸೋತಿರುತ್ತಿದ್ದೆನು. ನನಗೆ ಇತರರಲ್ಲಿ ತೀರ ತಡೆಯುಲಾಗದ್ದು ಅಥವಾ ಕಂಡುಹಿಡಿದಾಗ ಇತರರಲ್ಲಿ ನಾನು ಅತಿಯಾಗಿ ದೂಷಿಸಿದ್ದು ಏನನ್ನು? ನಾನು ಅವರಿಗೆ ಯಾವ ರೀತಿಯ ಅನ್ಯಾಯವನ್ನು ಮಾಡುತ್ತಿದ್ದೆನೋ ಆ ರೀತಿಯ ಅನ್ಯಾಯವನ್ನೇ. ನಾನು ಅದನ್ನು ಮಾಡಿದಾಗ ಯಾರಾದರೂ ನನ್ನಲ್ಲಿ ತಪ್ಪು ಹುಡುಕಿದರೆ ನಾನು ಒಪ್ಪಿಕೊಳ್ಳುತ್ತಿರಲಿಲ್ಲ; ಜಗಳಮಾಡುತ್ತಿದ್ದೆ. ಅರಿಯದ ಹುಡುಗರು ಎನ್ನುವೆವಲ್ಲಾ; ಅರಿಯುದ್ದೆನ್ನುವುದು ಇದೇಯೋ? ಅಲ್ಲ, ನನ್ನೊಡೆಯ ಅಲ್ಲ. ನನ್ನ ದೇವರೇ, ನಿನಗೆ ಮೊರೆಯಿಡುತ್ತೇನೆ. ವಯಸ್ಸು ಬಂದಮೇಲೂ ಮಾಡುವುದು ಇದೇ ತಪ್ಪುಗಳನ್ನು. ಬಾಲ್ಯದ ಉಪಾಧ್ಯಾಯರು ಗುರುಗಳು ಕಡಲೇಕಾಯಿ ಚೆಂಡು ಬುಗುರಿಗಳಿಂದ, ವಯಸ್ಸಿನಲ್ಲಿ ಅಧಿಕಾರಿಗಳು ರಾಜರು ಹೊನ್ನು ಹೆಣ್ಣು ಮಣ್ಣು ಮನೆಗಳಿಗೆ ಮಾರ್ಪಾಡು ಆಗುತ್ತದೆ ಅಷ್ಟೆ. ಬಾಲ್ಯದ ಬೆತ್ತಕ್ಕೆ ಪ್ರತಿಯಾಗಿ ವಯಸ್ಸಿನಲ್ಲಿ ಹೆಚ್ಚಿನ ಶಿಕ್ಷೆ ಬರುತ್ತದೆ.''

ಜೀವನದಲ್ಲಿ ಅವಕಾಶ ಎಷ್ಟು ದೊರಕಿದರೆ ಅಷ್ಟೇ ಭಗವತ್ಕೃಪೆ. ತನ್ನ ಬದುಕನ್ನು ಬಾಲ್ಯದಲ್ಲೇ ತೀರಿಸಿದ್ದರೂ ದೇವರು ವಂದನೀಯನಾಗಿರುತ್ತಿದ್ದನೆಂದು ಈತನ ಅಭಿಪ್ರಾಯ.

''ಆದರೂ ಪ್ರಪಂಚದ ಸೃಷ್ಟಿಕರ್ತನೂ ಅಧಿನಾಯಕನೂ ಆದ ನಿನಗೆ ನನ್ನ ಬದುಕು ಬಾಲ್ಯದಲ್ಲಿಯೇ ಮುಗಿದಿದ್ದರೂ ವಂದನೆಗಳು ಸಲ್ಲತಕ್ಕದ್ದೆ. ಏಕೆಂದರೆ ಆಗ ಕೂಡ ನಾನು ಇದ್ದೆನು; ಜೀವಿಸಿದ್ದೆನು, ಅನುಭವಿಸಿದೆನು; ಒಳಗಣ ಬುದ್ಧಿಯಿಂದ ಹೊರಗಣ ಇಂದ್ರಿಯುಗಳ ಸಮಷ್ಟಿಯನ್ನು ಕಾಪಾಡಿಕೊಂಡೆನು. ಹತ್ತಾರು ಕೆಲಸದಲ್ಲಿ ಹತ್ತಾರು ವಿಷಯಗಳನ್ನು ನೋಡುವುದರಲ್ಲಿ ಸತ್ಯದಿಂದ ಸುಖಪಡುವುದನ್ನು ಕಲಿತೆನು; ಮೋಸಗೊಳ್ಳುವುದು ಎಂದರೆ ದ್ವೇಷಿಸಿದೆನು. ಒಳ್ಳೆಯ ಜ್ಞಾಪಕಶಕ್ತಿಯನ್ನು ಪಡೆದಿದ್ದೆನು; ವಾಚಾಳನಾಗಿದ್ದೆನು. ಸ್ನೇಹದಿಂದ ಸುಖಿಯಾಗುತ್ತಿದ್ದೆನು; ನೋವನ್ನೂ ಅಯೋಗ್ಯತೆಯನ್ನೂ ಅಜ್ಞಾನವನ್ನೂ ಸಾಧ್ಯವಾದಮಟ್ಟಿಗೆ ತಪ್ಪಿಸಿಕೊಳ್ಳು

ವೆನು. ಅಷ್ಟು ಸಣ್ಣ ಪ್ರಾಣಿಯಲ್ಲಿ ಆಶ್ಚರ್ಯಕರವಲ್ಲದ್ದಾವುದು? ಸ್ತೋತ್ರಾರ್ಹವಲ್ಲದ್ದಾವುದು? ಆದರೆ ಎಲ್ಲವೂ ನಮ್ಮ ದೇವರ ಕೊಡುಗೆ. ಇದರಲ್ಲಿ ಯಾವುದನ್ನೂ ನಾನೇ ನನಗೆ ಕೊಟ್ಟುಕೊಳ್ಳಲಿಲ್ಲ. ಇದೆಲ್ಲ ಒಳ್ಳೆಯದು. ಇದೆಲ್ಲ ಸೇರಿ ನಾನು. ಆದಕಾರಣ ನನ್ನನ್ನು ಮಾಡಿದ ನೀನು ಒಳ್ಳೆಯವನು. ಆ ನೀನೇ ನನ್ನ ಒಳ್ಳೆಯದು. ಆ ನಿನ್ನ ಸಾನ್ನಿಧ್ಯದಲ್ಲಿ ನನ್ನ ಬಾಲ್ಯದ ಎಲ್ಲಾ ಒಳ್ಳೆಯದಕ್ಕಾಗಿ ನಾನು ಉಬ್ಬುತ್ತೇನೆ.''

ತಾರುಣ್ಯ ಬಂದು ಇವನಿಗೆ ವಿಷಯಾಸಕ್ತಿಯುಂಟಾಯಿತು. ತಾಯಿ ಇವನಿಗೆ ಬುದ್ಧಿವಾದ ಹೇಳಿದಳು; ಇವನು ಕೇಳಲಿಲ್ಲ.

''ನನ್ನ ಹದಿನಾರನೆಯ ವಯಸ್ಸಿನಲ್ಲಿ ಪಾಠಶಾಲೆಯನ್ನು ಬಿಟ್ಟು ನಮ್ಮ ತಂದೆತಾಯಿಗಳೊಂದಿಗೆ ಇರುವ ಕಾಲದಲ್ಲಿ ಅಶುಚಿಯಾದ ಆಶೆಯ ಪೊದೆಯೊಂದು ನನ್ನನ್ನು ಆವರಿಸಿಕೊಂಡಿತು. ಅದನ್ನು ಕಿತ್ತುಹಾಕುವವರಿರಲಿಲ್ಲ. ನಮ್ಮ ತಂದೆಯು ಸ್ನಾನಘಟ್ಟದಲ್ಲಿ ನನ್ನನ್ನು ನೋಡಿದನು. ನನ್ನ ನಡತೆಯಿಂದ ಮುಂದಕ್ಕೆ ತನಗೆ ವಂಶಜರು ಇರುವರೆಂಬ ಕಾರಣದಿಂದಲೋ ಎಂಬಂತೆ ಸಂತುಷ್ಟನಾಗಿ ನಾನು ಪ್ರಾಯವಂತನಾದೆನೆಂಬುದನ್ನು ನಮ್ಮ ತಾಯಿಗೆ ತಿಳಿಸಿದನು. ನೀನು ನಮ್ಮ ತಾಯ ಮನಸ್ಸಿನಲ್ಲಿ ನಿನ್ನ ಆಲಯವನ್ನು ಮೊದಲುಮಾಡಿ ಆ ಕಟ್ಟಡದ ಪಾಯವನ್ನು ಹಾಕಿದ್ದೆ; ನಮ್ಮ ತಂದೆಯಾದರೋ ಆಗತಾನೆ ನಿನ್ನ ಮತದ ಪರಿಚಯವನ್ನು ಮಾಡಿಕೊಂಡಿದ್ದನು. ಆದಕಾರಣ ನಮ್ಮ ತಾಯಿ ನಾನು ಎಲ್ಲಿ ಕೆಟ್ಟುಹೋಗುವೆನೋ ಎಂದು ಭಯದಿಂದ ನಡುಗಿದಳು. ನಾನು ನಿನ್ನನ್ನು ಬಿಟ್ಟು ದೂರ ನಡೆದಂತೆ ನೀನು ಸುಮ್ಮನಿದ್ದೆಯೆಂದು ನಾನು ಹೇಳಲಾಗುವುದೆ? ಆ ಕಾಲದಲ್ಲಿ ನೀನು ಸುಮ್ಮನಿದ್ದುದೆನ್ನುವುದು ನಿಜವೆ? ಹಾಗಾದರೆ ನಿನ್ನ ಭಕ್ತಳಾದ ನಮ್ಮ ತಾಯ ಮೂಲಕ ನನ್ನ ಕಿವಿಗೆ ಬಿದ್ದ ಮಾತುಗಳು ನಿನ್ನವಲ್ಲದೆ ಮತ್ತೆ ಯಾರವು? ಆ ಮಾತಿನಂತೆ ನಾನು ನಡೆಯಲಿಲ್ಲ. ನಮ್ಮ ತಾಯಿ ನಾನು ಒಬ್ಬನೇ ಇರುವಾಗ ನನಗೆ ಬಹು ಒತ್ತಾಯದಿಂದ 'ವ್ಯಭಿಚಾರ ಮಾಡಬೇಡ; ಅದರಲ್ಲೂ ಮತ್ತೊಬ್ಬನ ಹೆಂಡತಿಯನ್ನು ಮುಟ್ಟಬೇಡ' ಎಂದು ಬುದ್ಧಿವಾದ ಹೇಳಿದಳು. ಈ ಬುದ್ಧಿವಾದವು ನನ್ನ ಮನಸ್ಸಿಗೆ ಹೆಣ್ಣಿಗೆ ತಕ್ಕ ಮಾತೆಂದು ತೋರಿತು. ಅನಂತರ ನಡೆಯುವುದನು

ನಾಚಿಕೆಗೇಡೆಂದು ಭಾವಿಸಿದೆನು. ಆ ಮಾತಾದರೋ ನಿನ್ನದು. ಇದನ್ನು ನಾನು ಕಾಣೆ. ಆ ಮಾತನ್ನು ನಮ್ಮ ತಾಯಿ ಹೇಳಿದಳೆಂದೂ ನೀನು ಸುಮ್ಮನಿದ್ದೆಯೆಂದೂ ನಾನು ಬಗೆದೆನು. ಆದರೆ ಅವಳ ಮುಖಾಂತರವಾಗಿ ನೀನು ನನಗೆ ನಿನ್ನ ಅಪ್ಪಣೆಯನ್ನು ತಿಳಿಸಿದೆ. ಅವಳ ಮಾತಿನಂತೆ ನಡೆಯದೆ ಅವಳಿಗೆ ಅಗೌರವ ತೋರಿ ನಿನ್ನ ಭಕ್ತಳ ನಿನ್ನ ಸೇವಕಳ ಪುತ್ರನು ನಾನು ನಿನಗೆ ಅಗೌರವವನ್ನು ತೋರಿಸುತ್ತಿದ್ದೆನು. ಆದರೆ ಹೀಗೆಂದು ಅರಿಯದೆ ನಾನು ಅದೇ ದಾರಿಯಲ್ಲಿ ಹರಿದೋಡಿದೆನು."

ಇವನ ತಂದೆ ತನ್ನ ಯೋಗ್ಯತೆಗೆ ಮಿಂಚಿದ ವೆಚ್ಚಕ್ಕೆ ತಲೆಗೊಟ್ಟು ಇವನನ್ನು ವಿದ್ಯಾಭ್ಯಾಸಕ್ಕೆ ಕಾರ್ಥೇಜಿಗೆ ಕಳುಹಿಸಿದನು. ಸಿಸಿರೋ ಎಂಬ ರೋಮನ್ ಲೇಖಕನ ಗ್ರಂಥ ಒಂದನ್ನು ನೋಡಿ ಇವನಿಗೆ ತತ್ತ್ವಜ್ಞಾನದ ಮೇಲೆ ಮನಸ್ಸು ಹೋಯಿತು.

"ನನ್ನ ಓದಿನಲ್ಲಿ ನನಗೆ ಸಿಸಿರೋವಿನ ಒಂದು ಪುಸ್ತಕವು ಸಿಕ್ಕಿತು. ಇದರಲ್ಲಿ ಈತನು ತತ್ತ್ವಜ್ಞಾನವನ್ನು ಪ್ರಶಂಸಿಸುತ್ತಾನೆ. ಜನರು ಈತನ ಮಾತನ್ನು ಹೊಗಳುತ್ತಾರೆ; ಅವನ ಒಳ್ಳೆಯತನವನ್ನು ಹೊಗಳುವುದಿಲ್ಲ. ಇವನ ಈ ಗ್ರಂಥವು ನನ್ನ ಆಶೆಗಳನ್ನು ಮಾರ್ಪಡಿಸಿತು; ನನ್ನ ಪ್ರಾರ್ಥನೆಯನ್ನು ನಿನ್ನ ಕಡೆಗೆ ತಿರುಗಿಸಿತು; ಹಿಂದಿನ ಅಪೇಕ್ಷೆ ಉದ್ದೇಶಗಳಿಂದ ಬೇರೆಯಾದ ಅಪೇಕ್ಷೆ ಉದ್ದೇಶಗಳನ್ನು ನನಗೆ ಕೊಟ್ಟಿತು. ಎಲ್ಲಾ ವ್ಯರ್ಥ ವಸ್ತುಗಳೂ ಅನುಪಯುಕ್ತವೆಂದು ನನಗೆ ತೋರಿದುವು. ಅಸಂಭಾವ್ಯವಾದಷ್ಟು ತೀವ್ರವಾದ ಒಂದು ಆಶೆಯಿಂದ ನಾನು ಅಮರವಾದ ಜ್ಞಾನವನ್ನು ಅಪೇಕ್ಷಿಸಿದೆನು. ಆಗ ನಾನು ನಿನ್ನ ಬಳಿ ಬರುವ ಉದ್ದೇಶದಿಂದ ನಾನಿದ್ದ ಕಡೆಯಿಂದ ಕದಲುವುದಕ್ಕೆ ಮೊದಲುಮಾಡಿದೆನು. ಆ ಗ್ರಂಥವನ್ನು ನನ್ನ ಮಾತಿನ ಚಮತ್ಕಾರವನ್ನು ಅಭಿವೃದ್ಧಿಗೊಳಿಸಿಕೊಳ್ಳಲಿಕ್ಕಾಗಿ ನಾನು ಉಪಯೋಗಿಸಿಕೊಳ್ಳಲಿಲ್ಲ. ಆ ಪುಸ್ತಕವು ನನ್ನಲ್ಲಿ ತನ್ನ ಶೈಲಿಯನ್ನು ನಿಲ್ಲಿಸಲಿಲ್ಲ; ತನ್ನ ವಿಷಯವನ್ನು ನಿಲ್ಲಿಸಿತು. ತತ್ತ್ವಜ್ಞಾನವೆಂದು ಹೆಸರಿಟ್ಟು ಜನರನ್ನು ತಪ್ಪು ದಾರಿಗೆ ಎಳೆಯುವವರು ಅನೇಕರಿದ್ದಾರೆ. ಇಂಥವರು ದೊಡ್ಡದಾಗಿ ಬಾಯಿ ತುಂಬ ಬರುವ ಗೌರವಾರ್ಹವಾಗಿ ಕಾಣುವ ಹೆಸರಿನಿಂದ ತಮ್ಮ ತಪ್ಪು ತಿಳಿವಳಿಕೆಯನ್ನು ಮರೆಯಿಸಿ ಪಾಠ

ಹೇಳುತ್ತಾರೆ. ಹಿಂದಿನ ಕಾಲದಲ್ಲಿ ಮತ್ತು ಈಚಿನ ಕಾಲದಲ್ಲಿ ಇದ್ದ ಇಂಥವರನ್ನು ಸಿಸಿರೋ ತನ್ನ ಗ್ರಂಥದಲ್ಲಿ ಹೊರಕ್ಕೆ ಹಾಕಿದ್ದಾನೆ. ಆಗ ನನಗೆ ನಿನ್ನ ಮತ ಗ್ರಂಥಗಳು ತಿಳಿಯುತ್ತಿರಲಿಲ್ಲವಾದುದರಿಂದ ತತ್ತ್ವವಾದಿಗಳ ಬಲೆಗೆ ಬೀಳಬೇಡವೆಂಬ ಬುದ್ಧಿವಾದವು ಇಷ್ಟರನುಟ್ಟಿಗೆ ಉಪಕಾರ ಮಾಡಿತು. ಈ ಗುಂಪು ಆ ಗುಂಪು ಎನ್ನದೆ ಸತ್ಯವೆನ್ನುವುದು ಯಾವುದೋ ಅದನ್ನು ಮಾತ್ರ ನಾನು ಮೆಚ್ಚುವವನಾದೆನು. ಎಂದರೆ ಇವನಲ್ಲಿ ಕ್ರಿಸ್ತ ಮತದ ಮಾತಿರಲಿಲ್ಲವಾದದ್ದರಿಂದ ತೃಪ್ತಿಯುಂಟಾಗಲಿಲ್ಲ. ಏಕೆಂದರೆ, ಹೇ ದೇವ, ನಿನ್ನ ಕೃಪೆಯಿಂದ ಕ್ರಿಸ್ತ ಎಂಬ ನಿನ್ನ ಮಗನ ಈ ನಾಮಧೇಯವನ್ನು ನನ್ನ ಹೃದಯವು ತಾಯ ಹಾಲಿನೊಂದಿಗೆ ಭಕ್ತಿಯಿಂದ ಕುಡಿದಿತ್ತು. ಕುಡಿದು ತನ್ನಂತರಾಳದಲ್ಲಿ ನಿಧಿಯಂತೆ ಇರಿಸಿಕೊಂಡಿತ್ತು. ಈ ಕಾರಣದಿಂದ ಈ ಹೆಸರು ಇಲ್ಲದಂಥ ಯಾವುದಾಗಲಿ ಎಷ್ಟು ಪಾಂಡಿತ್ಯದಿಂದ ಎಷ್ಟು ವಿನಯದಿಂದ ಎಷ್ಟು ನಿಶ್ಚಯದಿಂದ ಕೂಡಿದ್ದರೂ ನನಗೆ ಸಂಪೂರ್ಣವಾಗಿ ಮೆಚ್ಚಿಗೆಯಾಗುತ್ತಿರಲಿಲ್ಲ.''

ಇವನು ಕ್ರೈಸ್ತನಾಗದೆ ಇರಲಾಗಿ ಇವನ ತಾಯಿ ಬಹಳ ದುಃಖಿಸಿದಳು. ಈತನು ಸದ್ಗತಿಗೆ ಬರುವನೆಂದು ಅವಳಿಗೆ ಸ್ವಪ್ನವಾಯಿತು. ಒಬ್ಬ ಮಹಾಪುರುಷನು ಅವಳಿಗೆ ಧೈರ್ಯವನ್ನು ಹೇಳಿದನು.

"ನೀನು ಮೇಲಿನಿಂದ ನಿನ್ನ ಕೈಯನ್ನು ಕಳುಹಿಸಿಕೊಟ್ಟೆ. ನನ್ನನ್ನು ನನ್ನ ಕತ್ತಲಿನಿಂದ ಹೊರಕ್ಕೆ ಎಳೆದೆ. ನಮ್ಮ ತಾಯಿ ನಿನ್ನ ಭಕ್ತಳು. ನನ್ನನ್ನು ರಕ್ಷಿಸೆಂದು ನಿನ್ನ ಬಳಿ ಅತ್ತಳು; ದೇಹದಿಂದ ಮೃತರಾದ ತಮ್ಮ ಮಕ್ಕಳಿಗಾಗಿ ಇತರ ತಾಯಂದಿರು ದುಃಖಿಸುವುದಕ್ಕಿಂತ ಹೆಚ್ಚಾಗಿ ದುಃಖಿಸಿದಳು; ನಿನ್ನಿಂದ ಪ್ರಾಪ್ತವಾದ ಭಕ್ತಿ ಜ್ಞಾನಗಳಿಂದ ನಾನು ಜೀವನ್ಮೃತಿಯಲ್ಲಿ ಇದ್ದೆನೆಂಬುದನ್ನು ಗ್ರಹಿಸಿ ನಿನ್ನನ್ನು ಬಹಳವಾಗಿ ಪ್ರಾರ್ಥಿಸಿದಳು. ಅವಳು ನಿನಗೆ ಅಡ್ಡಬಿದ್ದವೇಳೆ ಅವಳ ಕಣ್ಣೀರು ನೆಲವನ್ನು ತೋಯಿಸಿತು. ಅದನ್ನು ನೀನು ನಿರಾಕರಿಸಲಿಲ್ಲ. ಹೌದು, ಅವಳ ಪ್ರಾರ್ಥನೆಯನ್ನು ನೀನು ಕೇಳಿದೆ. ಏಕೆಂದರೆ, ಅವಳಿಗೆ ಸಮಾಧಾನವನ್ನು ತಂದ ಆ ಸ್ವಪ್ನವು ಎಲ್ಲಿಯದು? ಈ ಸ್ವಪ್ನದ ಕಾರಣದಿಂದ ಅವಳು ನನ್ನನ್ನು ಮನೆಯಲ್ಲಿರಿಸಿಕೊಂಡು ಅವಳ ಜೊತೆಯಲ್ಲಿ ಊಟಮಾಡುವುದಕ್ಕೆ ಒಪ್ಪಿದಳು.

ಇದಕ್ಕೆ ಮೊದಲು ನನ್ನ ತಪ್ಪುದಾರಿಯನ್ನು ನೋಡಿ ಈ ಎರಡು ವಿಷಯದಲ್ಲಿಯೂ ಹಿಂಜರಿಯುವುದಕ್ಕೆ ಮೊದಲು ಮಾಡಿದ್ದಳು. ಸ್ವಪ್ನದಲ್ಲಿ ತಾನು ಒಂದು ಮರದ ದಬ್ಬೆಯ ಮೇಲೆ ನಿಂತಿದ್ದಂತೆಯೂ, ನಿಂತು ಅತಿಯಾಗಿ ದುಃಖಿಸುತ್ತಿರುವಂತೆಯೂ, ಆಗ ತನ್ನ ಬಳಿಗೆ ಸಂತುಷ್ಟನೂ ಹಸನ್ಮುಖನೂ ಆದ ದಿವ್ಯ ತರುಣನೊಬ್ಬನು ಬಂದಂತೆಯೂ, ಏತಕ್ಕೆ ಹೀಗೆ ದುಃಖಿಸಿ ದಿನವೂ ಅಳುತ್ತಿದ್ದೀಯೆ ಎಂದು ಅವನು ಕೇಳಲಾಗಿ ತಾನು ತನ್ನ ಸ್ಥಿತಿಯನ್ನು ಹೇಳಿದಂತೆಯೂ, ಅದಕ್ಕವನು ನಿನ್ನ ಚಿಂತೆಯನ್ನು ಬಿಡು ಇಗೋ ನೋಡು ನೀನಿರುವಲ್ಲಿಯೇ ಅವನೂ ಇದ್ದಾನೆ ಎಂದು ತೋರಿದಂತೆಯೂ, ತಾನು ಪಕ್ಕದಲ್ಲಿ ನೋಡಲಾಗಿ ನಾನು ಅವಳ ಜೊತೆಗೆ ಅದೇ ದಬ್ಬೆಯ ಮೇಲೆ ನಿಂತಿದ್ದುದನ್ನು ನೋಡಿದಂತೆಯೂ ಕಂಡಳು. ನಿನ್ನ ಕಿವಿ ಅವಳ ಕರುಳ ಕೂಗನ್ನು ಕೇಳಿ ತಿರುಗಿದ್ದರಿಂದಲ್ಲದೆ ಈ ಸ್ವಪ್ನ ಬಿದ್ದೀತು ಹೇಗೆ? ಹೇ ಸುಶೀಲ, ಸರ್ವಶಕ್ತ, ಒಬ್ಬೊಬ್ಬನನ್ನೂ ನೀನು ಅವನೊಬ್ಬನೇ ನಿನ್ನ ಕಾಪಿಗೆ ವಿಷಯನೆಂಬಂತೆ ನೋಡಿಕೊಳ್ಳುತ್ತಿದ್ದೀಯೆ. ಹಾಗೆಯೇ ಸೃಷ್ಟಿಯನ್ನೇ ಒಬ್ಬ ಮನುಷ್ಯ ಮಾತ್ರವೋ ಎಂಬಂತೆ ಕಾಪಾಡುತ್ತೀಯೆ. ಮತ್ತೆ ಇದು ಹೇಗೆ? ತನ್ನ ಸ್ವಪ್ನವನ್ನು ನನ್ನ ತಾಯಿ ನನಗೆ ತಿಳಿಸಲು ನಾನಿರುವ ಸ್ಥಿತಿಗೆ ಅವಳು ಬರುವಳೆಂದು ಅದರ ಅರ್ಥವೆಂದು ತಿರುಗಿಸುವುದಕ್ಕೆ ನಾನು ಪ್ರಯತ್ನಮಾಡಿದೆನು. ನಮ್ಮ ತಾಯಿ ಯೋಚನೆಮಾಡದೆ ಉತ್ತರಕ್ಷಣದಲ್ಲಿಯೇ, ಹಾಗಲ್ಲ ಅವನಿರುವ ಕಡೆ ನೀನಿರುವೆ ಎಂದು ನನಗೆ ಹೇಳಲಿಲ್ಲ, ನೀನಿರುವ ಕಡೆಯೇ ಅವನಿರುವನು ಎಂದು ಹೇಳಿದ್ದು, ಎಂದು ಉತ್ತರಕೊಟ್ಟಳು. ಇದು ಹೇಗೆ? ದೇವ, ನಾನು ಇದನ್ನು ನಿನ್ನಲ್ಲಿ ವಿಜ್ಞಾಪಿಸುತ್ತೇನೆ. ನಾನು ಮಾಡಬಹುದಾದ ಅಪಾರ್ಥದಿಂದ ಮೋಸಗೊಳ್ಳದೆ ನಮ್ಮ ತಾಯಿ ಸರಿಯಾದ ಅರ್ಥವನ್ನು ಅಷ್ಟು ಸುಲಭವಾಗಿ ನೋಡಿದುದು ತನ್ನ ಆ ಭಾವವನ್ನು ನನಗೆ ಹೇಳಿದುದು ಅವಳ ಮೂಲಕ ನೀನು ಕೊಟ್ಟ ಉತ್ತರ. ಅವಳು ಹೇಳಿದ ಸ್ವಪ್ನಕ್ಕಿಂತಲೂ ಅವಳ ಈ ಉತ್ತರದಿಂದ ನನಗೆ ಹೆಚ್ಚು ಆಶ್ಚರ್ಯವಾಯಿತು. ಪುಣ್ಯಶಾಲಿಯಾದ ನಮ್ಮ ತಾಯಿಗೆ ನೀನು ಈ ಸ್ವಪ್ನದ ಮೂಲಕ ಮುಂದೆ ಬಹುಕಾಲದ ಮೇಲೆ ಬರುವ ಶುಭವನ್ನು ಅವಳ ಪರಿತಾಪದ ಶಮನಕ್ಕಾಗಿ ಆಗಲೇ

ಸೂಚಿಸಿದೆ. ಇದಾದಮೇಲೆ ಹತ್ತಿರ ಹತ್ತಿರ ಒಂಬತ್ತು ವರುಷದಷ್ಟು ಕಾಲ ನಾನು ನನ್ನ ಆಗಣ ಜೀವನದ ಆಳವಾದ ಬದಿಯಲ್ಲಿ ಮಿಥ್ಯಾಜ್ಞಾನದ ಕತ್ತಲಲ್ಲಿ ಹೊರಳಾಡಿದೆನು. ಅನೇಕಾವೃತ್ತಿ ಏಳುವುದಕ್ಕೆ ಪ್ರಯತ್ನ ಮಾಡಿದೆನು; ಆದರೆ ಮೊದಲಿಗಿಂತ ಹೆಚ್ಚಾಗಿ ಉರುಳಿದೆನು. ಇದಿಷ್ಟು ಕಾಲವೂ ಆ ಶುದ್ಧಳಾದ ದೈವಭಕ್ತಳಾದ ಆ ವಿನೀತಳಾದ ವಿತಂತು ಒಂದು ಕ್ಷಣಬಿಡದೆ ತನ್ನ ಮಗನನ್ನು ಸಂರಕ್ಷಿಸೆಂದು ನಿನ್ನನ್ನು ಪ್ರಾರ್ಥಿಸಿದಳು. ಇಂಥವರಲ್ಲಿ ನಿನಗೆ ಪ್ರೀತಿ. ಆ ಸ್ವಪ್ನದಿಂದ ಸ್ವಲ್ಪ ಧೈರ್ಯಗೊಂಡರೂ ಅವಳು ನನಗಾಗಿ ದುಃಖಿಸುವುದನ್ನು ಕಡಮೆ ಮಾಡಲಿಲ್ಲ. ಅವಳ ಪ್ರಾರ್ಥನೆಗಳು ನಿನ್ನ ಸಾನ್ನಿಧ್ಯವನ್ನು ಸಾರಿದುವು. ಈ ಮಧ್ಯೆ ನೀನು ಅವಳಿಗೆ ಕೊಟ್ಟ ಇನ್ನೊಂದು ಉತ್ತರವು ನನಗೆ ಜ್ಞಾಪಕ ಬರುತ್ತದೆ. ನಮ್ಮ ತಾಯಿ ನಿನ್ನ ಮತದಲ್ಲಿ ಬೆಳೆದವನೂ ಮತ್ತು ನಿನ್ನ ಗ್ರಂಥಗಳನ್ನು ಬಲ್ಲವನೂ ಆದ ಒಬ್ಬ ಪಾದ್ರಿಯನ್ನು ಸಮೀಪಿಸಿ ನನ್ನೊಂದಿಗೆ ಮಾತನಾಡಿ ನನ್ನ ದುರ್ಭಾವನೆಗಳನ್ನು ಬಿಡಿಸಿ ತಪ್ಪುಗಳನ್ನು ಖಂಡಿಸಿ ಸತ್ಯವನ್ನುಪದೇಶಿಸಬೇಕೆಂದು ಪ್ರಾರ್ಥಿಸಿದಳು. ಅವನು ಮಾಡುವುದಿಲ್ಲವೆಂದನು. ಉಪದೇಶಕ್ಕೆ ಅರ್ಹರಾದವರು ದೊರೆತರೆ ಈತನು ಉಪದೇಶಮಾಡುವನು. ಈಗ ಇನ್ನೂ ನನಗೆ ಉಪದೇಶಮಾಡಿ ಪ್ರಯೋಜನವಿಲ್ಲವೆಂದು ಅವನು ನನ್ನ ತಾಯಿಗೆ ತಿಳಿಸಿದನು. ನಮ್ಮ ತಾಯಿ ಅದಕ್ಕೆ ಒಪ್ಪದೆ ಅತ್ತು ಕರೆದು ಬಲವಂತ ಮಾಡಲು ಅವನು ಸ್ವಲ್ಪ ಅಸಮಾಧಾನಪಟ್ಟು ಅವಳನ್ನು ಕುರಿತು, ನಡೆ ನಡೆ, ದೇವರು ನಿನಗೆ ಒಳ್ಳೆಯದನ್ನು ಮಾಡಲಿ, ಹಠಮಾಡಬೇಡ, ಇಷ್ಟು ಕಣ್ಣೀರಿನ ಮಗು ದುರ್ಗತಿಗೆ ಹೋಗಲಾರದು, ಎಂದು ಹೇಳಿದನು. ಈ ಉತ್ತರವನ್ನು ನಮ್ಮ ತಾಯಿ ದಿವ್ಯವಾಣಿಯೆಂದೇ ಬಗೆದಳು. ಈ ಮಾತನ್ನು ನನಗೆ ಆಗಾಗ ಹೇಳುವಳು.

"ಹೀಗೆ ಒಂಬತ್ತು ವರ್ಷಕಾಲ ನಾವು ಎಂದರೆ ನಾನು ಸೇರಿದ ಗುಂಪಿನವರೂ ನಾನೂ ಒಬ್ಬರನ್ನೊಬ್ಬರು ತಪ್ಪುದಾರಿಗೆ ಹಿಡಿದೆಳೆಯುತ್ತ, ಮೋಸಗೊಳಿಸುತ್ತಾ, ಶಾಸ್ತ್ರಗಳೆಂಬ ಹೆಸರಿನಿಂದ ಮತವೆಂಬ ಹೆಸರಿನಿಂದ ಒತ್ತಟ್ಟು ಡಂಭದಲ್ಲಿ ಒತ್ತಟ್ಟು ಮೂಢಭಕ್ತಿಯಲ್ಲಿ ಕಾಲ ಕಳೆದೆವು."

ಬಾಲ್ಯದ ಸ್ನೇಹಿತನೊಬ್ಬನು ಕ್ರೈಸ್ತ ದೀಕ್ಷೆಯನ್ನು ತೆಗೆದುಕೊಂಡು ತೀರಿಹೋದದ್ದನ್ನೂ, ಅದರಿಂದ ತನಗೆ ಆದ ಅನುಭವವನ್ನೂ ಈತನು ಹೀಗೆ ನೆನೆದುಕೊಳ್ಳುತ್ತಾನೆ.

"ನಾನು ನಮ್ಮೂರಿನಲ್ಲಿ ಸಾಹಿತ್ಯ ಪಾಠವನ್ನು ಹೇಳುವುದಕ್ಕೆ ಆರಂಭಿಸಿದಾಗ ಒಬ್ಬ ಸ್ನೇಹಿತನನ್ನು ಮಾಡಿಕೊಂಡಿದ್ದೆನು. ಈತನು ನನಗೆ ಬಹು ವಿಧದಲ್ಲಿ ಜೊತೆಗಾರನಾಗಿ ಬಹಳ ಪ್ರಿಯನಾಗಿದ್ದನು. ನಾವು ಸಮವಯಸ್ಕರು. ಯೌವನದ ಆರಂಭದೆಸೆಯಲ್ಲಿದ್ದೆವು. ಆಟವಾಡುವುದರಲ್ಲಿ ಪಾಠಶಾಲೆಯಲ್ಲಿ ಜೊತೆಯಾಗಿರುತ್ತಿದ್ದೆವು. ಆದರೂ ಆಗ್ಗೆ ಅವನು ನನಗೆ ನಿಜವಾಗಿ ಮಿತ್ರನೆನಿಸಿದ್ದನೆಂದು ಹೇಳಲಾರೆ. ನಮ್ಮಾತ್ಮದಲ್ಲಿ ನಿನ್ನ ಕೃಪೆಯಿಂದ ಪ್ರಸರಿಸುವ ಪ್ರೇಮದ ಮೂಲಕ ನೀನು ಜೊತೆ ಸೇರಿಸುವವರು ನಿಜವಾದ ಸ್ನೇಹಿತರಲ್ಲದೆ ಇತರರ ಸ್ನೇಹವು ಹೇಗೆ ನಿಜವಾದೀತು? ಎಂಥದಾದರೂ ನನ್ನ ಅವನ ಸ್ನೇಹವು ಬಹುಸುಖದಾಯಕವಾಗಿತ್ತು; ಒಂದೇ ಪಾಠದ ವಿಶ್ವಾಸದಿಂದ ಅಭಿವೃದ್ಧಿಯಾಗಿತ್ತು. ಅವನು ಚಿಕ್ಕಂದಿನಲ್ಲಿ ನಿನ್ನ ಮತದ ಮುಖ್ಯ ತತ್ತ್ವಗಳನ್ನು ಸಂಪೂರ್ಣವಾಗಿ ಗ್ರಹಿಸದ ಕಾರಣದಿಂದ ನಾನವನನ್ನು ತಪ್ಪುದಾರಿಗೆ ಎಳೆದೆನು. ನಮ್ಮ ತಾಯಿ ಯಾವ ಅಕ್ರೈಸ್ತ ತತ್ತ್ವಕಥೆ ಇವುಗಳ ಕಾರಣದಿಂದ ನಾನು ಕೆಟ್ಟೆನೆಂದು ದುಃಖಿಸುತ್ತಿದ್ದಳೋ ಅವುಗಳನ್ನು ನಾನು ಅವನಿಗೂ ಕಲಿಸಿದೆನು. ನನ್ನ ತಪ್ಪು ತಿಳಿವಳಿಕೆಯು ಅವನದೂ ಆಯಿತು. ನಾನೂ ಕೂಡ ಅವನನ್ನು ಬಿಟ್ಟಿರಲಾರದವನಾದೆನು. ಆದರೇನು? ನೀನು ನಿನ್ನನ್ನು ಬಿಟ್ಟುಹೋಗುತ್ತಿದ್ದವನ ಹಿಂದೆಯೇ ಬಂದೆ. ತಪ್ಪಿಗೆ ದಂಡನೆಮಾಡಿಯೂ ದಯೆಗೆ ಸಾಗರವಾಗಿರುವ ನೀನು ನಿನ್ನ ವಿಚಿತ್ರ ರೀತಿಯಲ್ಲಿ ನಮ್ಮನ್ನು ನಿನ್ನ ಕಡೆಗೆ ತಿರುಗಿಸಿಕೊಂಡೆ. ನಮ್ಮ ಸ್ನೇಹದ ಒಂದು ವರ್ಷ ಮುಗಿಯುವುದರೊಳಗೆ ಅವನನ್ನು ಈ ಬದುಕಿನಿಂದ ಕರೆದುಕೊಂಡೆ. ನಿನ್ನ ಸ್ತೋತ್ರವನ್ನು ಮುಗಿಸಬಲ್ಲವರಾರು? ನಿನ್ನ ನ್ಯಾಯದ ವ್ಯವಸ್ಥೆಯ ಆಳವನ್ನು ಹಿಡಿದವರಾರು? ಈ ನನ್ನ ಮಿತ್ರನು ತೀವ್ರವಾದ ಜ್ವರದಿಂದ ನೆನವು ಮರೆದು ಮರಣಶಯ್ಯೆಯಲ್ಲಿ ಮಲಗಿದನು. ಉಳಿಯಲಾರನೆಂಬ ಭಯದಿಂದ ಅವನಿಗೆ ಆ ಅಜ್ಞಾನದಲ್ಲಿಯೇ ನಿನ್ನ ದೀಕ್ಷೆಯನ್ನು ನಡೆಯಿಸಿದರು. ಅವನ ಆತ್ಮವು ನಾನು ಕಲಿಸಿರುವ ವಿಷಯವನ್ನು

ಗ್ರಹಿಸಿರುವಂತೆ, ಈ ಅಜ್ಞಾನದಲ್ಲಿ ಮೈಮರೆದಿರುವಾಗ ಮೈಗೆ ಮಾಡಿದ ಈ ದೀಕ್ಷೆಯ ಪರಿಣಾಮವನ್ನು ಪಡೆದಿರಲಾರನೆಂದು ನಾನು ತಿಳಿದುಕೊಂಡೆನು. ನಿಜವೋ ಕೇವಲ ವ್ಯತ್ಯಸ್ತವಾಗಿತ್ತು. ಇದಾದ ಸ್ವಲ್ಪ ಹೊತ್ತಿಗೆ ಅವನು ಜ್ವರ ಕಡಿಮೆಯಾಗಿ ಎಚ್ಚೆತ್ತನು. ಆಗ ನಾನು ಅದುವರೆಗೂ ಹತ್ತಿರ ದಲ್ಲಿಯೇ ಇದ್ದವನು ಅವನ ಸಂಗಡ ಈ ದೀಕ್ಷೆಯನ್ನು ಕುರಿತು ಸ್ವಲ್ಪ ಪರಿಹಾಸ್ಯಮಾಡಿದೆನು. ನೆನಪಿಲ್ಲದ ಸಮಯದಲ್ಲಿ ತನಗೆ ನಡೆದ ದೀಕ್ಷೆಯನ್ನು ಕುರಿತು ಅವನೂ ನಗುವನೆಂದು ನಾನು ಭಾವಿಸಿದ್ದೆನು. ಅವನು ನಗಲಿಲ್ಲ; ಹಗೆಯಿಂದ ಎಂಬಂತೆ ನನ್ನಿಂದ ದೂರ ಸರಿದನು. ಎಂದೂ ಇಲ್ಲದ ಆಶ್ಚರ್ಯ ಕರವಾದ ದಿಟ್ಟತನದೊಡನೆ ನನಗೆ ತನ್ನ ಸ್ನೇಹಿತನಾಗಿರಬೇಕಾದರೆ ಇಂಥ ಮಾತನ್ನಾಡಕೂಡದೆಂದು ತಿಳಿಸಿದನು. ನಾನು ಆಶ್ಚರ್ಯದಿಂದ ಚಕಿತನಾಗಿ ಇವನಿಗೆ ಆರೋಗ್ಯವಾಗಲಿ, ಆಮೇಲೆ ಸರಿಯಾಗಿ ಉತ್ತರವನ್ನು ಕೊಡುವೆನು ಎಂದು ಸುಮ್ಮನಾದೆನು. ಅವನಿಗೆ ಆರೋಗ್ಯವಾಗಲಿಲ್ಲ. ನನ್ನ ಶುಭಕ್ಕಾಗಿ ಅವನು ನಿನ್ನ ಪಾದಾರವಿಂದದಲ್ಲಿ ಸುಖಿಯಾಗಲು ಈ ಪ್ರಪಂಚದಿಂದ ಒಯ್ಯಲ್ಪಟ್ಟನು. ಕೆಲವು ದಿವಸದ ಮೇಲೆ ನಾನಿಲ್ಲದ ವೇಳೆ ಅವನಿಗೆ ಮತ್ತೆ ಜ್ವರ ಬಂದು ಅವನು ತೀರಿಹೋದನು.''

ಇದರ ನೆನಪಿನಲ್ಲಿ ಇವನು ಮಾನವನಿಗೆ ಹೇಳುವ ಬುದ್ಧಿವಾದ ಇದು.

''ನಿನಗೆ ಒಂದು ದೇಹ ಒಂದು ಆತ್ಮ ಸಂತೋಷವನ್ನುಂಟುಮಾಡಿದರೆ ಅವುಗಳಿಗಾಗಿ ದೇವರನ್ನು ಸ್ತೋತ್ರಮಾಡು. ಅವುಗಳ ವಿಷಯದಲ್ಲಿನ ನಿನ್ನ ಪ್ರೇಮವನ್ನು ಅವುಗಳ ಕರ್ತನ ಕಡೆಗೆ ತಿರುಗಿಸು. ಇಲ್ಲದಿದ್ದರೆ ಸಂತುಷ್ಟಿ ಯನ್ನು ಕೊಡುವ ಇವುಗಳ ಕಾರಣದಿಂದ ನೀನು ಭಗವಂತನಿಗೆ ಅಸಂತುಷ್ಟಿಯನ್ನುಂಟುಮಾಡೀಯೆ. ನಿನಗೆ ಮತ್ತೊಂದು ಆತ್ಮವು ಮೆಚ್ಚುಗೆ ಯಾದರೆ ಅದನ್ನು ದೇವರ ಸಲುವಾಗಿ ಪ್ರೀತಿಸು. ಏಕೆಂದರೆ ಅದು ಮಾರ್ಪಡ ತಕ್ಕದ್ದು. ಅವನಲ್ಲಿ ಮಾತ್ರ ಸ್ಥಿರವಾಗಿರತಕ್ಕದ್ದು. ಹೀಗಲ್ಲದಿದ್ದರೆ ಅದು ನಷ್ಟವಾಗುತ್ತಿತ್ತು. ಆದರಿಂದ ಅವನಲ್ಲಿ ಅದನ್ನು ಪ್ರೀತಿಸು. ಅವನೆಡೆಗೆ ನಿನ್ನ ಕೈಯಲ್ಲಾದಷ್ಟು ಆತ್ಮಗಳನ್ನು ಕರೆದುಕೊಂಡು ಹೋಗು. ಆ ಆತ್ಮಗಳಿಗೆ ಈ ಮಾತನ್ನು ಹೇಳು: 'ಅವನನ್ನು ಪ್ರೀತಿಸೋಣ ನಾವು, ಅವನನ್ನು ಪ್ರೀತಿಸೋಣ; ಅವನು ಇದನ್ನೆಲ್ಲ ಮಾಡಿದನು; ಅನ್ಯೇನೂ

ದೂರದಲ್ಲಿಯೂ ಇಲ್ಲ; ಇವುಗಳನ್ನು ಮಾಡಿ ಅವನು ಹೊರಟುಹೋಗಲಿಲ್ಲ; ಇವೆಲ್ಲ ಅವನ ಭಾಗಗಳು ಅವನಲ್ಲಿವೆ. ಅಗೋ, ಸತ್ಯದಲ್ಲಿ ಪ್ರೀತಿಯಿರುವ ಆಯೆಡೆಯಲ್ಲಿ ಅವನಿದಾನೆ. ಅವನು ಹೃದಯದ ಆಂತರ್ಯದಲ್ಲಿದಾನೆ. ಆದರೂ ಹೃದಯವು ಅವನಿಂದ ದಾರಿ ತಪ್ಪಿಹೋಗಿದೆ. ದಾರಿ ತಪ್ಪಿದವರೇ, ನಿಮ್ಮ ಹೃದಯದ ಆಂತರ್ಯಕ್ಕೆ ಹೋಗಿ. ನಿಮ್ಮನ್ನು ಮಾಡಿದ ಅವನನ್ನು ಅಪ್ಪಿಕೊಳ್ಳಿ. ಅವನ ಜೊತೆಗೆ ನಿಲ್ಲಿ. ನಿಮ್ಮ ನಿಲುವು ಭದ್ರವಾಗುವುದು. ಅವನಲ್ಲಿ ವಿಶ್ರಾಂತರಾಗಿ. ಕಾಡಿನಲ್ಲಿ ಎಲ್ಲಿಗೆ ಹೋಗುತ್ತಿರುವಿರಿ? ಯಾವ ಸ್ಥಳಕ್ಕೆ? ನೀವು ಪ್ರೀತಿಸುವ ಒಳ್ಳೆಯದೆನ್ನುವುದು ಅವನಿಂದ ಬರತಕ್ಕದ್ದು. ಅವನ ಹೆಸರನ್ನು ಹೇಳಿ ಅನುಭವಿಸಿದರೆ ಅದು ಒಳ್ಳೆಯದೂ, ಸುಖಕರ ವಾದದ್ದೂ ಆಗುತ್ತದೆ. ಅವನನ್ನು ಬಿಟ್ಟರೆ ಅದರ ಮೇಲಣ ಪ್ರೇಮವು ಅನ್ಯಾಯವಾಗುವುದು. ಆದುದರಿಂದ ನ್ಯಾಯವಾಗಿ ನಿಮಗೆ ನೋವುಂಟಾ ಗುತ್ತದೆ. ಯಾವ ಪುರುಷಾರ್ಥಕ್ಕಾಗಿ ನೀವು ಮತ್ತೆ ಮತ್ತೆ ಈ ಕಠಿನವಾದ, ಈ ಆಯಾಸಕರವಾದ ದಾರಿಯಲ್ಲಿ ನಡೆಯುವಿರಿ. ನೀವು ಹುಡುಕುವಲ್ಲಿ ಶಾಂತಿಯಿಲ್ಲ. ನೀವು ಬೇಕಾದಹಾಗೆ ಹುಡುಕಿ, ಹುಡುಕುವಲ್ಲಿ ಅದು ಇಲ್ಲ. ಸಾವಿನ ಭೂಮಿಯಲ್ಲಿ ನೀವು ಸುಖಜೀವನವನ್ನು ಅಪೇಕ್ಷಿಸುವಿರಿ. ಅದು ಅಲ್ಲಿ ಇಲ್ಲ. ಜೀವನವೇ ಇಲ್ಲದ ಕಡೆ ಸುಖವಾದ ಜೀವನವು ಹೇಗಿರ ಬಹುದು?''

ರೋಮಿಗೆ ಬಂದು ಈತನು ಕಾಯಿಲೆ ಬಿದ್ದನು. ತನ್ನ ತಾಯ ಹರಕೆ ಪ್ರಾರ್ಥನೆಗಳಿಂದ ತಾನು ಬದುಕಿಕೊಂಡೆನೆಂದು ಹೇಳುತ್ತಾನೆ.

''ನಾನು ರೋಮಿಗೆ ಬಂದಾಗ ನನ್ನನ್ನು ರೋಗವು ಎದುರು ಗೊಂಡಿತು. ನಿನ್ನ ವಿಷಯದಲ್ಲಿ ಇತರರ ವಿಷಯದಲ್ಲಿ ನಾನು ಮಾಡಿದ್ದ ಅನೇಕ ಪಾಪಗಳೊಂದಿಗೆ ನಾನು ಸಾಯುವುದರಲ್ಲಿದ್ದೆನು. ಈ ರೀತಿಯ ಘೋರ ಪಾಪಗಳಲ್ಲಿ ಸಾಯುವುದೇ ನಮ್ಮ ಸ್ವಭಾವದಲ್ಲಿ ಸಾಯುವಿಕೆ. ಅಸಂಸ್ಕೃತವಾಗಿ ನರಕದಲ್ಲಿ ನಿಲ್ಲುವಿಕೆ. ಆಗ್ಯೆ ನಾನು ಕ್ರೈಸ್ತನಾಗದೆ ಇದ್ದದ್ದರಿಂದ ನನ್ನ ತಪ್ಪುಗಳನ್ನು ನೀನು ಮನ್ನಿಸಲಾಗಿರಲಿಲ್ಲ. ನಾನು ಸಾಯುವಂತೆ ಕಾಯಿಲೆ ಬಿದ್ದದ್ದು ನಮ್ಮ ತಾಯಿಗೆ ತಿಳಿಯದು. ಆದರೂ ತಾನಿದ್ದ ಕಡೆ ಆಕೆ ನನಗಾಗಿ ನಿನ್ನಲ್ಲಿ ಪ್ರಾರ್ಥನೆಮಾಡುತ್ತಿದ್ದಳು. ಆದರೆ

ಸರ್ವವ್ಯಾಪಿಯಾದ ನೀನು ಅವಳಿರುವ ಸ್ಥಳದಲ್ಲಿ ಅವಳ ಪ್ರಾರ್ಥನೆಯನ್ನು ಕೇಳಿ ನಾನಿರುವ ಸ್ಥಳದಲ್ಲಿ ನನ್ನ ಮೇಲೆ ದಯೆ ತೋರಿಸಿದೆ. ನನ್ನ ಮನಸ್ಸು ಇನ್ನೂ ಸರಿಹೋಗದಿದ್ದರೂ ದೇಹವನ್ನು ನೀನು ಸರಿಪಡಿಸಿದೆ. ಮನಸ್ಸು ಸರಿಹೋಗಲಿಲ್ಲವೆನ್ನುವುದು ಹೇಗೆಂದರೆ ಕ್ರೈಸ್ತನಾಗಬೇಕೆಂದು ಆಗ ನನಗೆ ತೋರಲಿಲ್ಲ. ಹುಡುಗನಾಗಿದ್ದಾಗ ದೀಕ್ಷೆ ಕೊಡಿಸೆಂದು ನಮ್ಮ ತಾಯನ್ನು ಕೇಳಿದ ಕಾಲದಲ್ಲಿ, ಈ ಮಧ್ಯವಯಸ್ಸಿನಲ್ಲಿ ಇದ್ದದ್ದಕ್ಕಿಂತ ನಾನು ಒಳ್ಳೆಯ ವನಾಗಿದ್ದೆನು.''

ಆಮೇಲೆ ಇವನು ಮಿಲಾನ್ ನಗರಕ್ಕೆ ಒಬ್ಬ ಉಪಾಧ್ಯಾಯನಾಗಿ ಬಂದಾಗ ಆಂಬ್ರೋಸ್ ಗುರುವಿನ ಮಾತನ್ನು ಕೇಳಿದನು. ಅವನ ಮಾತಿನ ಸೊಗಸಿಗೆ ಸೋತು ಬರಬರುತ್ತ ಅವನ ಉಪದೇಶಕ್ಕೆ ಮನಸ್ಸನ್ನು ಕೊಟ್ಟನು.

"ನಾನು ಮಿಲಾನ್ ನಗರಕ್ಕೆ ಬಂದೆನು. ಬಿಷಪ್ ಆಂಬ್ರೋಸನು ಆಗ ಅಲ್ಲಿ ಇದ್ದನು. ಈತನು ನಿನ್ನ ಭಕ್ತನೆಂದೂ ಸಾಧುಗಳಲ್ಲಿ ಸಾಧು ವೆಂದೂ ಪ್ರಪಂಚದಲ್ಲೇ ಪ್ರಸಿದ್ಧನಾಗಿದ್ದನು. ಈತನ ದಿವ್ಯವಾಣಿಯು ಆಗ ನಿನ್ನವರಿಗೆ ಜೀವಪೋಷಕವಾದ ನಿನ್ನ ತತ್ತ್ವದ ಸಾರವನ್ನು ತುಂಬಿ ನೀಡುತ್ತಿತ್ತು. ಉದ್ದೇಶವಿಲ್ಲದೆ ನಾನು ಅವನಲ್ಲಿಗೆ ನಿನ್ನಿಂದ ಒಯ್ಯ ಲ್ಪಟ್ಟೆನು. ಉದ್ದೇಶಪೂರ್ವಕವಾಗಿ ಅವನಿಂದ ನಿನ್ನ ಬಳಿಗೆ ನಡೆತಂದೆನು. ಆ ಭಗವದ್ಭಕ್ತನು ನನ್ನನ್ನು ಮಗುವಿನಂತೆ ಕಂಡನು. ಈ ವಿಷಯದಲ್ಲಿ ಗುರುವಾದವನು ತೋರಬೇಕಾದ ಕನಿಕರವನ್ನು ತೋರಿದನು. ಅಂದಿನಿಂದ ನನಗೆ ಅವನಲ್ಲಿ ಪ್ರೀತಿ. ಗುರುವೆಂಬ ಕಾರಣದಿಂದ ಭಕ್ತಿಯಿಂದ ಅಲ್ಲ. ಏಕೆಂದರೆ, ನಿನ್ನ ಮತದಲ್ಲಿ ಸತ್ಯವಿದೆಯೆಂಬ ಭಾವನೆಯನ್ನು ನಾನು ಬಿಟ್ಟು ಬಿಟ್ಟಿದ್ದೆನು. ಆ ಪ್ರೀತಿಗೆ ಕಾರಣ ಅವನು ನನ್ನ ವಿಷಯದಲ್ಲಿ ದಯೆವುಳ್ಳವ ನೆಂದು. ಅವನು ಜನರಿಗೆ ಮಾಡುತ್ತಿದ್ದ ಉಪದೇಶವನ್ನು ನಾನು ಎಚ್ಚರದಿಂದ ಕೇಳುತ್ತಿದ್ದೆನು. ವಿಷಯವನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದಲ್ಲ, ಆತನು ಮಾತನಾಡುವುದರಲ್ಲಿ ಬಹಳ ಪ್ರಸಿದ್ಧನಾಗಿದ್ದುದರಿಂದ. ಇವನು ಹೆಸರುವಾಸಿಗೆ ತಕ್ಕಷ್ಟು ಚೆನ್ನಾಗಿ ಮಾತನಾಡುತ್ತಾನೆಯೇ ಎಂದು ಪರೀಕ್ಷಿಸುವ ರೀತಿಯಲ್ಲಿ. ಆದರೂ ನನಗೆ ತಿಳಿಯದೆಯೇ ನಾನು ಸ್ವಲ್ಪ ಸ್ವಲ್ಪವಾಗಿ ಜ್ಞಾನದ ಸಮೀಪಕ್ಕೆ ಬರುತ್ತಿದ್ದೆನು.

“ಅವನು ಏನು ಹೇಳುತ್ತಾನೆಂದು ಗಮನಿಸದೆ ಅವನು ಹೇಗೆ ಮಾತನಾಡುತ್ತಾನೆಂದು ನಾನು ನೋಡುತ್ತಿದ್ದರೂ, ನಾನು ಇಷ್ಟಪಟ್ಟು ಕೇಳುತ್ತಿದ್ದ ಆ ಮಾತುಗಳೊಂದಿಗೆ ಇಷ್ಟಪಡದೇ ಇದ್ದರೂ ಅವನ ಉಪದೇಶವು ನನ್ನ ಮನಸ್ಸನ್ನು ಹೊಕ್ಕಿತು. ಇವನ್ನು ನಾನು ಬೇರ್ಪಡಿಸಲಾರದೆ ಹೋದೆನು. ಇವನು ಎಷ್ಟು ಲಕ್ಷಣವಾಗಿ ಮಾತನಾಡುತ್ತಾನೆ ಎಂದು ಹೇಳುವುದಕ್ಕೆ ಮನಸ್ಸುಮಾಡುವಲ್ಲಿ ನನಗೆ ಇವನು ಎಷ್ಟು ಸತ್ಯವನ್ನು ಹೇಳುತ್ತಿದಾನೆ ಎಂಬುದೂ ತೋರಿತು. ಆದ್ದರಿಂದ ಸತ್ಯವೆಂದು ಬೇರೆ ಯಾವುದಾದರೂ ಕಾಣುವವರೆಗೂ ನಮ್ಮ ತಾಯಿ ತಂದೆಗಳು ಯಾವುದನ್ನು ನಂಬು ಎಂದರೋ ಆ ಕ್ಯಾಥೊಲಿಕ್ ತತ್ತ್ವ ಬೋಧೆಯನ್ನು ನಂಬಿ ನಡೆಯುವುದೆಂದು ನಿರ್ಧರಿಸಿ ನಾನು ಆ ಮಠದ ಶಿಷ್ಯನಾಗಿ ನಿಂತೆನು.”

ಮಗನನ್ನು ಬಿಟ್ಟಿರಲಾರದೆ ತಾಯಿ ಅಲ್ಲಿಗೆ ಬಂದಳು. ಆಂಬ್ರೋಸನು ಅವಳನ್ನು ನೋಡಿ ಬಹಳವಾಗಿ ಮೆಚ್ಚಿಕೊಂಡನು. ಆತನು ಅಗಸ್ಟೀನನಿಗೆ ಇಂಥ ತಾಯನ್ನು ಪಡೆಯುವುದಕ್ಕೆ ನೀನು ಪುಣ್ಯಮಾಡಿದ್ದೆ ಎಂದು ಹೇಳಿದನು.

“ನಮ್ಮ ತಾಯಿ ನಾನಿದ್ದ ಸ್ಥಳಕ್ಕೆ ಬಂದಳು. ಆಕೆಗೆ ಭಕ್ತಿಯಿಂದ ಮನಸ್ಸು ದೃಢವಾಗಿತ್ತು. ಕಷ್ಟದಲ್ಲೆಲ್ಲಾ ನಿನ್ನ ಮೇಲೆ ಭಾರಹಾಕಿ ನೆಲದಮೇಲೆ ಜಲದಮೇಲೆ ಪ್ರಯಾಣಮಾಡಿ ಅವಳು ನನ್ನನ್ನು ಹಿಂಬಾಲಿಸಿದಳು. ಸಮುದ್ರದ ಮೇಲೆ ಬರುವಂದು ಅಪಾಯವೊದಗುವಂತಿರಲು ಸಾಮಾನ್ಯವಾಗಿ ನಾವಿಕರು ಪ್ರಯಾಣಿಕರಿಗೆ ಧೈರ್ಯ ಹೇಳುವಂತೆ ಹೇಳುವ ಬದಲು ಈಕೆ ತಾನೇ ನಾವಿಕರಿಗೆ ಧೈರ್ಯ ಹೇಳಿದಳು. ನೀನು ಸ್ವಪ್ನದಲ್ಲಿ ಅವಳಿಗೆ ದಡ ಸೇರುವೆಯೆಂದು ಅಭಯವನ್ನು ಇತ್ತಿದ್ದೆಯೆಂದು ಅವರಿಗೆ ಭರವಸೆಕೊಟ್ಟಳು. ನಾನು ಇನ್ನೂ ರೋಮನ್ ಕ್ಯಾಥೊಲಿಕ್ ಆಗದಿದ್ದರೂ ಇತರ ವಿಷಯಗಳಲ್ಲಿ ನಂಬಿಕೆಯನ್ನು ಬಿಟ್ಟಿದ್ದೆನಷ್ಟೆ; ಆದುದರಿಂದ ಆಕೆ ಅಷ್ಟೇನೂ ಸಂತುಷ್ಟಳಾಗಲಿಲ್ಲ. ಆದರೆ ಇದರಿಂದ ಆಕೆಗೆ ಒಂದು ಧೈರ್ಯವುಂಟಾಯಿತು. ನನ್ನನ್ನು ಉದ್ಧಾರಮಾಡುತ್ತೇನೆಂದು ಸ್ವಪ್ನದಲ್ಲಿ ಹೇಳಿದ್ದ ನೀನು ಇದಿಷ್ಟನ್ನು ನಡೆಯಿಸಿಕೊಟ್ಟ ಕಾರಣ ಮುಂದಕ್ಕೆ

ಇನ್ನುಳಿದದ್ದನ್ನು ನಡೆಯಿಸಿಕೊಡುವೆ ಎಂದು ನಂಬಿದಳು. ಆದ್ದರಿಂದಲೇ ನನಗೆ ಶಾಂತಭಾವದಿಂದ 'ನಮ್ಮಪ್ಪನ ಕೃಪೆಯಿಂದ ನಾನು ಸಾಯುವ ಮೊದಲು ನೀನು ಕ್ಯಾಥೊಲಿಕ್ ಕ್ರೈಸ್ತನಾದದ್ದನ್ನು ಈ ಕಣ್ಣಿನಿಂದ ನೋಡುತ್ತೇನೆ' ಎಂದಳು. ನನಗೆ ಹೇಳಿದ ಮಾತು ಇಷ್ಟು. ಆದರೆ ನಿನ್ನ ಸಾನ್ನಿಧ್ಯದಲ್ಲಿ ಇವನಿಗೆ ಶೀಘ್ರದಲ್ಲಿ ನಿನ್ನ ಸಹಾಯವಾಗಲಿ, ಶೀಘ್ರದಲ್ಲಿ ನಿನ್ನ ಬೆಳಕು ಕಾಣಲಿ ಎಂದು ಮತ್ತೆ ಮತ್ತೆ ಬೇಡಿದಳು. ಕಣ್ಣೀರು ಸುರಿಸಿ ಪ್ರಾರ್ಥಿಸಿದಳು. ಆಂಬ್ರೋಸನಿಂದ ನಾನು ಇಷ್ಟರಮಟ್ಟಿಗೆ ಉದ್ಧಾರವಾದೆನೆಂದು ಅವಳು ಆತನನ್ನು ದೈವಿಕ ಪುರುಷನೆಂದು ಭಾವಿಸಿದಳು. ಆತನು ಇವಳ ಭಕ್ತಿಯನ್ನೂ ಶ್ರದ್ಧೆಯನ್ನೂ, ಆಕೆ ಮಠಕ್ಕೆ ತಪ್ಪದೆ ಬರುವುದನ್ನೂ ನೋಡಿ ಅವಳ ಭಕ್ತಿಯ ಮಾತನ್ನು ಕೇಳಿ ಬಹಳ ಸಂತೋಷಪಟ್ಟನು. ನನ್ನನ್ನು ಕಂಡಾಗ ಅನೇಕ ವೇಳೆ 'ಇಂತ ತಾಯಿ ಹೊಟ್ಟೆಯಲ್ಲಿ ಹುಟ್ಟುವುದಕ್ಕೆ ನೀನು ಪುಣ್ಯಮಾಡಿದ್ದೆ'ಯೆಂದು ಆಕೆಯನ್ನು ಬಹಳವಾಗಿ ಸ್ತುತಿಸಿದನು."

ಕ್ರೈಸ್ತಮತದ ವಿಷಯದಲ್ಲಿ ಅಪನಂಬಿಕೆಯ ಸ್ಥಿತಿಯಲ್ಲಿದ್ದ ಈತನ ಮನಸ್ಸು ಮೆಲ್ಲಮೆಲ್ಲನೆ ನಂಬಿಕೆಯ ಸ್ಥಿತಿಗೆ ಬಂದಿತು.

"ನನ್ನೊಡೆಯ, ಆಮೇಲೆ ನೀನು ಮೆಲ್ಲಮೆಲ್ಲನೆ ನಿನ್ನ ಮೆದುವಾದ ದಯಾಪೂರ್ಣವಾದ ಕೈಗಳಿಂದ ನನ್ನ ಹೃದಯವನ್ನು ಮುಟ್ಟಿ ಸರಿಪಡಿಸಿ ನನ್ನನ್ನು ಒಪ್ಪಿಸಿದೆ. ಕಾಣದಿರುವ ಎಷ್ಟು ವಿಷಯಗಳನ್ನು ನಾನು ನಂಬುತ್ತೇನೆ ಎಂಬುದನ್ನು ನಾನು ಭಾವಿಸಿದೆನು. ಇತಿಹಾಸದಲ್ಲಿ ನಡೆದುವೆಂಬ ಸಂಗತಿಗಳು ಎಷ್ಟು? ದೇಶಗಳ ನಗರಗಳ ಮಾತು ಎಷ್ಟು? ಸ್ನೇಹಿತರಿಂದ ಕೇಳಿದ ಮಾತು, ವೈದ್ಯರಿಂದ ಕೇಳಿದ ಮಾತು, ಇತರ ಜನರಿಂದ ಕೇಳಿದ ಮಾತು ಇವೆಲ್ಲ ಎಷ್ಟು? ಇವರ ಮಾತುಗಳನ್ನು ನಂಬದೆ ಇದ್ದರೆ ನಾವು ಜೀವನದಲ್ಲಿ ನಡೆಯುವುದೇ ಕಷ್ಟವಾದೀತು. ಇದೆಲ್ಲ ಇರಲಿ, ನಾವು ಇಂಥ ತಂದೆ ತಾಯಿ ಮಕ್ಕಳು ಎಂದು ಎಷ್ಟು ಖಂಡಿತವಾಗಿ ನಂಬುತ್ತೇವೆ. ಇತರರ ಮಾತನ್ನು ಕೇಳಿ ಅಲ್ಲದೆ ಇದನ್ನು ಹೀಗೆಯೇ ಎಂದು ನಾವು ಹೇಳುವಂತಿಲ್ಲ. ಆದರೂ ನಾವು ಹಾಗೆಂದು ನಂಬುತ್ತೇವೆ. ಆದ್ದರಿಂದ ನಿನ್ನ ವೇದವನ್ನು ನಂಬಿದವರು ಆಕ್ಷೇಪಣೆಗೆ ಪಾತ್ರರಾಗುವುದಿಲ್ಲ; ನಂಬದವರಮೇಲೆಯೇ

ಆಕ್ಷೇಪವು ಬರುವುದು. ಇಷ್ಟನ್ನು ನಾನು ಕೆಲವು ವೇಳೆ ಹೆಚ್ಚಾಗಿ ಕೆಲವು ವೇಳೆ ಕಡಿಮೆಯಾಗಿ ನಂಬಿದ್ದೆನು. ನೀನು ಇರುವೆಯೆಂದೂ ನಮ್ಮನ್ನು ನೋಡಿಕೊಳ್ಳುತ್ತಿದ್ದೀಯೆಂದೂ ನನಗೆ ಚೆನ್ನಾಗಿ ನಂಬುಗೆ. ನಾವೇ ಯೋಚನೆಮಾಡಿ ಸತ್ಯವನ್ನು ಕಂಡುಕೊಳ್ಳುವುದು ಕಷ್ಟವೆಂಬ ಕಾರಣ ದಿಂದಲೇ ನಮಗೆ ವೇದವು ಬೇಕಾದದ್ದು. ಇದರಿಂದಲೇ ನೀನು ವೇದಕ್ಕೆ ಸಮಸ್ತ ದೇಶಗಳಲ್ಲಿಯೂ ಪ್ರಾಶಸ್ತ್ಯವನ್ನು ಕೊಟ್ಟದ್ದು. ಅದರ ಮೂಲಕ ನಿನ್ನಲ್ಲಿ ನಂಬುಗೆಯನ್ನು ಪಡೆಯಬೇಕೆಂದೂ, ಅದರ ಮೂಲಕ ನಿನ್ನನ್ನು ಮನುಷ್ಯನು ಆಶಿಸಬೇಕೆಂದು ನಿನ್ನ ಉದ್ದೇಶವೆಂದೂ ಇದರಿಂದ ಊಹಿಸಬಹುದು. ಇದುವರೆಗೆ ವೇದದಲ್ಲಿ ಯಾವ ಮಾತು ನನಗೆ ವಿಚಿತ್ರ ವಾಗಿ ಕಂಡಿತೋ ಆ ಮಾತುಗಳನ್ನು ಸಮಂಜಸವಾಗಿ ವಿವರಿಸಿದ್ದನ್ನು ಕೇಳಿ ನಾನು ಇದು ಬುದ್ಧಿಯಿಂದ ಅತೀತವಾದ ವಿಷಯವೆಂದು ಕಂಡೆನು. ಅಂಥ ಮಾತು ಈಗ ಎಂದಿಗಿಂತಲೂ ಹೆಚ್ಚು ಗೌರವನೀಯವಾಗಿ ಕಂಡಿತು. ಇದನ್ನೆಲ್ಲ ನಾನು ವಿಚಾರಮಾಡಿಕೊಂಡಾಗ ನೀನು ನನ್ನ ಜೊತೆಯಲ್ಲಿದ್ದೆ. ನಾನು ಬಿಟ್ಟ ನಿಟ್ಟುಸಿರುಗಳನ್ನು ನೀನು ಕೇಳಿದೆ. ನಾನು ಸಂದೇಹ ಪಟ್ಟಾಗ ನೀನು ನನ್ನನ್ನು ನಡೆಯಿಸಿದೆ. ಪ್ರಪಂಚದ ವಿಶಾಲವಾದ ತಪ್ಪು ದಾರಿಯಲ್ಲಿ ನಾನು ಅಲೆದಾಡಿದೆನು. ಆಗಲೂ ನೀನು ನನ್ನ ಕೈಬಿಡಲಿಲ್ಲ."

ಇವನಿಗೆ ಮರ್ಯಾದೆ ಲಾಭಗಳಮೇಲೆ ಇದ್ದ ಆಶೆ ಕಡಿಮೆಯಾಯಿತು. ಪ್ರಪಂಚದ ಮನ್ನಣೆ ಸಂಪತ್ತಿಗಾಗಿ ದುಡಿಯುವುದು ವ್ಯರ್ಥ ಶ್ರಮವೆಂದು ಇವನು ಕಂಡುಕೊಂಡನು.

"ನಾನು ಮರ್ಯಾದೆಗಾಗಿ ಲಾಭಕ್ಕಾಗಿ ಮದುವೆಗಾಗಿ ಆಸೆ ಪಟ್ಟೆನು. ನೀನು ನನ್ನನ್ನು ನಂಬಿಸಿದೆ. ಇದರಲ್ಲೆಲ್ಲ ನಾನು ಬಹಳ ಕಷ್ಟಕ್ಕೆ ಒಳಗಾದೆನು. ನೀನಿಲ್ಲದ ಯಾವುದೂ ನನಗೆ ಅಪೇಕ್ಷಣೀಯವಾಗದಂತೆ ಮಾಡಿ ನನ್ನ ವಿಷಯದಲ್ಲಿ ನಿನ್ನ ಹಿರಿಯ ಕೃಪೆಯನ್ನು ತೋರಿಸಿದೆ. ನಾನು ಚಕ್ರವರ್ತಿಯನ್ನು ಸ್ತೋತ್ರಮಾಡಿ ಭಾಷಣಮಾಡಬೇಕೆಂದಿದ್ದ ಒಂದು ದಿವಸ ನಾನು ಎಷ್ಟು ಕ್ಲೇಶಪಟ್ಟೆನು. ನನಗೆ ಆ ಕ್ಲೇಶವು ಮನ ತಟ್ಟುವಂತೆ ಮಾಡುವುದಕ್ಕೆ ನೀನು ನನಗೆ ಎಂತ ಸ್ಥಿತಿಯನ್ನು ಕೊಟ್ಟೆ. ಆ ಸ್ತೋತ್ರದಲ್ಲಿ ನಾನು ಅನೇಕ ಸುಳ್ಳುಗಳನ್ನು ಹೇಳಬೇಕೆಂದು ಉದ್ಯೋಗಿ

ಸಿದ್ದೆನು. ಆ ಸುಳ್ಳು ಎಲ್ಲವೂ ಸುಳ್ಳೆಂದು ಬಲ್ಲ ಜನರು ಅದಕ್ಕಾಗಿ ನನ್ನನ್ನು ಶ್ಲಾಘಿಸುವರಿದ್ದರು. ಈ ಮಹಾ ಸಾಮ್ರಾಜ್ಯಕ್ಕಾಗಿ ನನ್ನ ಮನಸ್ಸು ಕ್ಷೋಭೆಗೆ ಸಿಕ್ಕಿತ್ತು. ಏನಾಗುವುದೋ ಎಂಬ ಭಯವು ನನ್ನ ಮನಸ್ಸನ್ನೇ ಮುಸುಕಿತ್ತು. ಆ ವೇಳೆ ಮಿಲಾನ್ ನಗರದ ಬೀದಿಯಲ್ಲಿ ಬರುತ್ತಾ ನಾನು ಒಬ್ಬ ಬಡಭಿಕ್ಷುಕನನ್ನು ನೋಡಿದೆನು. ಆಗ ಅವನಿಗೆ ಹೊಟ್ಟೆ ತುಂಬಿತ್ತೆಂದು ಕಾಣುತ್ತದೆ. ಅವನು ಹಾಸ್ಯಮಾಡುತ್ತಾ ನಗುತ್ತಾ ಇದ್ದನು. ಅವನನ್ನು ನೋಡಿ ನಾನು ನಿಟ್ಟುಸಿರುಬಿಟ್ಟು ನನ್ನ ಭಾವನೆಯನ್ನು ನನ್ನ ಮಿತ್ರರಿಗೆ ಹೇಳಿದೆನು. ಆ ಭಿಕ್ಷುಕನು ಭಿಕ್ಷೆಬೇಡಿ ಯಾವ ಸುಖವನ್ನು ಸಂಪಾದಿಸಿದ್ದನೋ ಅದನ್ನು ನಾನು ಬಹು ತೊಳಲಿ ಬಹು ಬಳಲಿ ಸಂಪಾದಿಸುವುದಕ್ಕೆ ಯತ್ನಮಾಡುತ್ತಿದ್ದೆನು. ಅವನು ಸಂಪಾದಿಸಿದ್ದುದು ನಿಜವಾದ ಸುಖವಲ್ಲ; ನಿಜ. ಆದರೆ ನಾನು ಸಂಪಾದಿಸಬೇಕೆಂದಿದ್ದದ್ದು ಅದರಷ್ಟು ನಿಜವಾದ ಸುಖವೂ ಅಲ್ಲ. ಅವನೋ ಸಂತೋಷವಾಗಿದ್ದಾನೆ; ನಾನು ಕಾತರನಾಗಿದೇನೆ. ಅವನು ನಿಶ್ಚಿಂತನಾಗಿದ್ದಾನೆ; ನಾನು ಭೀತನಾಗಿದೇನೆ. ನನಗೆ ನಗುತ್ತಿರುವುದಕ್ಕೆ ಇಷ್ಟವೋ ಅಳುತ್ತಿರುವುದಕ್ಕೆ ಇಷ್ಟವೋ ಎಂದು ಯಾರಾದರೂ ನನ್ನನ್ನು ಕೇಳಿದ್ದರೆ ನಗುತ್ತಿರುವುಕ್ಕೆ ಎಂದು ಹೇಳುತ್ತಿದ್ದೆನು. ಆ ಭಿಕ್ಷುಕನಂತಿರುವೆಯೋ ನೀನಾಗಿಯೇ ಇರುವೆಯೋ ಎಂದು ಕೇಳಿದ್ದರೆ ಭೀತನಾದರೂ ಚಿಂತಾಕುಲನಾದರೂ ನಾನಾಗಿಯೇ ಇರುವೆನು ಎನ್ನುತ್ತಿದ್ದೆನು. ಆದರೆ ಇದು ತಪ್ಪಾದ ಭಾವನೆ. ಏಕೆಂದರೆ ನಾನಾಗಿ ಎಂದರೆ ದುಃಖಿತನಾಗಿ ಎನ್ನುವುದು ನಿಜವೆ? ಭಿಕ್ಷುಕನಿಗಿಂತ ಹೆಚ್ಚು ಓದಿದವನಾದ ಮಾತ್ರಕ್ಕೆ ಭಿಕ್ಷುಕನ ಸ್ಥಿತಿ ಬೇಡ ನನ್ನ ಸ್ಥಿತಿ ಇರಲಿ ಎನ್ನುವುದು ಸರಿಯಲ್ಲ. ನನ್ನ ಓದಿನಿಂದ ನನಗೆ ಸುಖ ಬರಲಿಲ್ಲ. ಆ ಓದಿನ ಮೂಲಕ ನಾನು ಇತರರನ್ನು ಮೆಚ್ಚಿಸುವುದಕ್ಕಷ್ಟೇ ಯತ್ನಿಸುತ್ತಿದ್ದೆನು. ತಿಳಿವಳಿಕೆಯನ್ನು ಕೊಡುವುದಕ್ಕಲ್ಲ; ಮೆಚ್ಚಿಸುವುದಕ್ಕೆ. ಈ ಯೋಚನೆಯನ್ನು ಕೊಟ್ಟು, ಹೇ ದೇವ, ನೀನು ನಿನ್ನ ಶಿಕ್ಷಾದಂಡದಿಂದ ನನ್ನ ಅಹಂಕಾರವನ್ನು ಮುರಿದೆ.''

ವಿಷಯಾಸಕ್ತಿಯಿಂದ ಇವನಿಗೆ ಬಿಡುಗಡೆ ಬರುವುದು ಇನ್ನು ಸ್ವಲ್ಪ ಸಾವಕಾಶವಾಯಿತು.

"ಹೆಂಗಸಿನ ತೋಳ್ತೆಕ್ಕೆಯಲ್ಲಿ ಸಿಕ್ಕದೆ ಇರುವಾಗ ಸುಖವಿಲ್ಲವೆಂದು ನಾನು ತಿಳಿದುಕೊಂಡಿದ್ದೆನು. ಈ ಚಾಪಲ್ಯದಿಂದ ಬಿಡಿಸುವುದಕ್ಕೆ ನಿನ್ನ ಕೃಪೆಯು ಎಂತ ಔಷಧವೆಂದು ನಾನು ಕಾಣದೆ ಇದ್ದೆ. ಅದರ ಶಕ್ತಿಯನ್ನು ನಾನು ಪರೀಕ್ಷಿಸಲಿಲ್ಲ. ಇಂದ್ರಿಯ ನಿಗ್ರಹವು ನನ್ನಲ್ಲಿರಲಿಲ್ಲ; ನಿಜ. ಆದರೂ ಅದು ಮನುಷ್ಯನ ಯತ್ನದಲ್ಲೇ ಇರಬೇಕೆಂದು ನಾನು ಭಾವಿಸಿದ್ದೆನು. ದೇವರು ಅನುಗ್ರಹಿಸದೆ ಇಂದ್ರಿಯ ನಿಗ್ರಹ ಬರುವುದಿಲ್ಲ ಎಂದು ಉಕ್ತವಾಗಿರುವುದನ್ನು ನಾನು ಅರಿತಿರಲಿಲ್ಲ. ಮನನೊಂದು ನಿನ್ನಡಿಯಲ್ಲಿ ಬೇಡಿಕೊಂಡರೆ ನಂಬಿ ನಿನ್ನಮೇಲೆ ಭಾರಹಾಕಿ ನಿಂತರೆ ನೀನು ಅದನ್ನು ದಯಪಾಲಿಸುವೆಯೆಂದು ನಾನು ತಿಳಿದಿರಲಿಲ್ಲ. ನನಗೆ ಮದುವೆ ಮಾಡಬೇಕೆಂದು ನಿರಂತರ ಯತ್ನವಾಯಿತು. ಒಂದು ಹೆಣ್ಣನ್ನು ಮದುವೆಗೆ ಕೇಳಿದ್ದಾಯಿತು. ಅವಳು ಒಪ್ಪಿಕೊಂಡಳು. ಅವಳಿಗೆ ಇನ್ನೂ ವಯಸ್ಸಾಗಲು ಎರಡು ವರುಷಬೇಕಾಗಿತ್ತಾದದ್ದರಿಂದ ಕಾಯುವುದೆಂದು ಏರ್ಪಾಡಾಯಿತು.

"ಈ ಮಧ್ಯೆ ನನ್ನ ಪಾಪಗಳು ಬೆಳೆಯುತ್ತ ಬಂದುವು. ನನ್ನ ವೇಶ್ಯೆಯು ಮದುವೆಗೆ ಒಂದು ಅಡ್ಡಿಯಾಗಬಹುದೆಂದು ಅವಳನ್ನು ನನ್ನಿಂದ ಬಿಡಿಸಿದರು. ಇದರಿಂದ ನನಗೆ ತೀವ್ರ ಯಾತನೆಯುಂಟಾಯಿತು. ಅವಳು ನನಗೆ ಹೆತ್ತಿದ್ದ ಮಗನನ್ನು ನನ್ನೊಡನೆ ಬಿಟ್ಟು ಇನ್ನು ಯಾವ ಪುರುಷನನ್ನೂ ಅರಿಯುವುದಿಲ್ಲವೆಂದು ಭಾಷೆಮಾಡಿ ಆಫ್ರಿಕಾಕ್ಕೆ ಹೊರಟುಹೋದಳು. ನಾನು ಪಾಪಿ. ಈ ಹೆಣ್ಣಿನಂತೆ ಕೂಡ ನಡೆದುಕೊಳ್ಳಲಾರದೆ ಹೋದೆನು. ನನಗೆ ಮದುವೆಯಾಗುವ ಹೆಣ್ಣು ನನ್ನಲ್ಲಿ ಬರುವುದು ಎರಡು ವರುಷವಾಗುವುದೆಂಬ ಕಾರಣ ಅದುವರೆಗೆ ಕಾಯಲಾರದೆ ಮತ್ತೊಬ್ಬ ವೇಶ್ಯೆಯನ್ನಿಟ್ಟುಕೊಂಡೆನು. ನನಗೆ ಬೇಕಾಗಿದ್ದುದು ಮದುವೆಯಲ್ಲ; ವಿಷಯಸುಖ."

ಈ ಎಲ್ಲ ಸಂದರ್ಭದಲ್ಲಿಯೂ ದೇವರು ಇವನನ್ನು ಮೆಲ್ಲನೆ ತನ್ನ ಬಳಿಗೆ ಕರೆದುಕೊಳ್ಳುತ್ತಿದ್ದನೆಂದು ಅಗಸ್ಟೀನನಿಗೆ ಆಮೇಲೆ ತೋರಿತು.

"ಹೇ ದಯಾಸಾಗರ, ನಿನಗೆ ಜಯವಾಗಲಿ, ಕಲ್ಯಾಣವಾಗಲಿ. ನಾನು ಹೀಗೆ ಹೆಚ್ಚು ಹೆಚ್ಚಿನ ದುಃಖಕ್ಕೆ ನಡೆಯುತ್ತಿರಲು ನೀನು ಆ ದಾರಿಯಲ್ಲಿಯೇ ನನ್ನ ಬಳಿಗೆ ಬಂದೆ. ಸಂಸಾರದ ಬದಿಯಿಂದ ನನ್ನನ್ನು

ಎತ್ತುವುದಕ್ಕೆ ತೋಳೆಯುವುದಕ್ಕೆ ನಿನ್ನ ಬಲಗೈ ಸದಾ ಸಿದ್ಧವಾಗಿತ್ತು; ಆದರೆ ಅದನ್ನು ನಾನರಿಯೆನು. ನಾನು ಸತ್ತನಂತರ ನೀನು ತಪ್ಪಿಗೆ ಶಿಕ್ಷೆ ವಿಧಿಸುವೆಯೆಂದು ನನಗೆ ಯಾವಾಗಲೂ ನಂಬಿಕೆಯಿತ್ತು. ಇದರಿಂದಲ್ಲದೆ ಇದ್ದರೆ ನಾನು ಇನ್ನೂ ಹೆಚ್ಚಾಗಿ ವಿಷಯ ಭೋಗದಲ್ಲಿ ಮುಳುಗುತ್ತಿದ್ದೆನು.''

ಕೊನೆಗೆ ಈತನಿಗೆ ಬಿಡುಗಡೆ ಬಂದ ರೀತಿ ಹೀಗೆ.

"ನನ್ನ ನೆರವೇ, ನನ್ನ ರಕ್ಷಕನೇ, ವಿಷಯಭೋಗಕ್ಕೆ ನನ್ನನ್ನು ಕಟ್ಟಿಹಾಕಿದ್ದ ಆಶೆಯ ಪಾಶದಿಂದಲೂ, ಪ್ರಪಂಚದ ಐಶ್ವರ್ಯದ ಸಲುವಾದ ದುಡಿತದಿಂದಲೂ ನೀನು ನನ್ನನ್ನು ಬಿಡಿಸಿದ ರೀತಿಯನ್ನು ಇನ್ನು ಬಿನ್ನವಿಸುತ್ತೇನೆ. ದಿನದಿನವೂ ಕಾತರತೆ ಮಿಗಿಲಾಗುತ್ತಿರಲು ನಾನು ಎಂದಿನ ಕೆಲಸದಲ್ಲಿ ಉದ್ಯುಕ್ತನಾಗಿರುತ್ತಾ ನಿನ್ನನ್ನು ಬೇಡುತ್ತಿದ್ದೆನು. ನಾನು ಸಿಕ್ಕಿಕೊಂಡಿದ್ದ ಕೆಲಸದಿಂದ ಬಿಡುವು ಸಿಕ್ಕಿದಾಗಲೆಲ್ಲ ದೇವಾಲಯಕ್ಕೆ ಹೋಗುತ್ತಿದ್ದೆನು. ಒಂದು ದಿನ ನಮ್ಮ ಬಳಿಗೆ ನಮ್ಮ ದೇಶೀಯನೂ ರಾಜಾಸ್ಥಾನದಲ್ಲಿ ಅಧಿಕಾರವುಳ್ಳವನೂ ಆದ ಪಾಂಟಿಟಿಯಾನಸ್ ಎಂಬಾತನು ಬಂದನು. ಅವನು ನಮ್ಮ ಬಳಿ ಏಕೆ ಬಂದನೋ ನಾನರಿಯೆನು. ಮಾತನಾಡುವುದಕ್ಕೆ ಕುಳಿತುಕೊಂಡೆವು. ಮುಂದೆ ಇದ್ದ ಒಂದು ಮೇಜಿನ ಮೇಲೆ ಯಾವುದೋ ಪುಸ್ತಕವಿರುವುದನ್ನು ಕಂಡು ಅವನು ಅದನ್ನು ಎತ್ತಿಕೊಂಡು ತೆರೆದು ನೋಡಿದನು. ಅದು ಪಾಲನ ಪತ್ರಗಳ ಪುಸ್ತಕ. ಅದನ್ನು ಅಲ್ಲಿ ಕಾಣುತ್ತೇನೆಂದು ಅವನು ಎಣಿಸಿರಲಿಲ್ಲ. ನಾನು ಪಾಠ ಹೇಳುವ ಪುಸ್ತಕಗಳಲ್ಲಿ ಯಾವುದೋ ಒಂದಿರಬೇಕೆಂದು ಅವನು ತಿಳಿದುಕೊಂಡಿದ್ದನು. ಇದನ್ನು ನೋಡಿ ಅವನು ಸಂತೋಷಪಟ್ಟನು. ನನ್ನ ಬಳಿ ಈ ಪುಸ್ತಕವಿರುವುದನ್ನೂ ಇನ್ನು ಯಾವುದೂ ಇಲ್ಲದಿರುವುದನ್ನೂ ನೋಡಿ ತನಗೆ ಆದ ಆನಂದವನ್ನೂ ಆಶ್ಚರ್ಯವನ್ನೂ ಸೂಚಿಸಿದನು. ಏಕೆಂದರೆ ಅವನು ಒಬ್ಬ ಕ್ರೈಸ್ತನು. ಅವನು ಹಾಗೆಯೇ ಮಾತನಾಡುತ್ತ ಕುಳಿತನು. ನಾವು ಸುಮ್ಮನೆ ಕೇಳುತ್ತಿರಲಾಗಿ ಅವನು ಇದನ್ನು ಹೇಳಿದನು. ಟ್ರೇಯರ್ಸ್ ನಗರದಲ್ಲಿ ಒಂದು ಮಧ್ಯಾಹ್ನ ತಾನೂ ತನ್ನ ಪರಿಚಯದ ಬೇರೆ ಮೂವರೂ ನಗರದ ಉಪವನದಲ್ಲಿ ತಿರುಗುವುದಕ್ಕೆ ಹೋಗಿರಲಾಗಿ ತಾನೂ ಜೊತೆಯವರಲ್ಲಿ

ಒಬ್ಬನೂ ಒಂದು ಕಡೆಗೂ ಇನ್ನಿಬ್ಬರು ಬೇರೆ ಒಂದು ಕಡೆಗೂ ಹೋದರಂತೆ. ಈ ಇಬ್ಬರೂ ಸುಳಿದಾಡುತ್ತ ಒಂದು ಗುಡಿಸಲ ಬಳಿ ಸೇರಿದರು. ಅದರಲ್ಲಿ ನಿನ್ನಧೀನರಾದ ಕೆಲಜನರು ಇದ್ದರು. ಅಲ್ಲಿ ಇವರು ಆಂಟೋನೀ ಸಾಧು ವಿನ ಜೀವನವನ್ನು ಕುರಿತ ಒಂದು ಸಣ್ಣ ಪುಸ್ತಕವನ್ನು ಕಂಡರು. ಇದನ್ನು ಅವರಲ್ಲಿ ಒಬ್ಬನು ಓದಿದನು; ಓದಿ ಮೆಚ್ಚಿದನು; ಅದರಿಂದ ಉತ್ಸಾಹ ಗೊಂಡನು; ತನ್ನ ರಾಜಕಾರ್ಯವನ್ನು ಬಿಟ್ಟು ನಿನ್ನ ಸೇವೆಯನ್ನು ಮಾಡಲು ಅಂಥ ಜೀವನವನ್ನು ಕೈಗೊಳ್ಳುವ ವಿಷಯವನ್ನು ಕುರಿತು ಯೋಚಿಸ ತೊಡಗಿದನು. ಉತ್ತರ ಕ್ಷಣದಲ್ಲಿ ನಿನ್ನ ಭಕ್ತಿಯಿಂದ ತುಂಬಿ ತನ್ನ ಬಾಳಿನ ವಿಷಯದಲ್ಲಿ ನಾಚಿಕೊಂಡು ಅವನು ತನ್ನ ಜೊತೆಯವನನ್ನು ಕುರಿತು, 'ನಾವು ಮಾಡುವ ಇದಿಷ್ಟು ಕೆಲಸದಿಂದ ನಮಗೆ ಬರಬೇಕಾದದ್ದೇನು, ನಮಗೇನು ಬೇಕು? ನಾವು ಏಕೆ ದುಡಿಯುತ್ತೇವೆ? ರಾಜನ ಆಸ್ಥಾನದಲ್ಲಿ ನಾವು ನಿರೀಕ್ಷಿಸಬಹುದಾದ ಐಶ್ವರ್ಯವಾವುದು? ಅವನ ಪ್ರೀತಿಗೆ ಪಾತ್ರ ರಾಗುವುದಲ್ಲವೆ? ಅದರಲ್ಲಿ ಪಡಸಲ್ಲದ ಸುಖ, ಕಷ್ಟದಿಂದ ಬೆರೆಯದೆ ಇರ ತಕ್ಕದ್ದು ಏನಿದೆ? ಎಷ್ಟು ಕಷ್ಟಗಳನ್ನು ದಾಟಿ ನಾವು ಈ ಕಷ್ಟದ ಸ್ಥಿತಿ ಯನ್ನು ಸಂಪಾದಿಸಬೇಕಾಗಿದೆ! ಅಲ್ಲಿ ನಾವು ಸೇರುವುದು ತಾನೇ ಎಂದಿಗೆ? ಆದರೆ ಇಲ್ಲಿ ನೋಡು, ದೇವರ ಭಕ್ತನೆಂಬ ಪದವಿಯನ್ನು ನಾನು ಅಪೇಕ್ಷಿಸದೆ ನಾದರೆ ಒಡನೆಯೇ ಪಡೆಯಬಹುದು' ಎಂದನು. ಮತ್ತೆ 'ನಮ್ಮ ಆಶೆಗಳನ್ನೆಲ್ಲಾ ನಾನು ಬಿಟ್ಟೆನು. ದೇವರ ಸೇವೆಯಲ್ಲಿ ನಿಲ್ಲುವುದಕ್ಕೆ ಮನಸ್ಸು ಮಾಡಿದೆನು. ಈಗ ಇಲ್ಲಿ ಇವನ್ನು ನಾನು ಆರಂಭಿಸುತ್ತೇನೆ. ನೀನು ನನ್ನಂತೆ ಮಾಡಲು ಇಷ್ಟವಿಲ್ಲದಿದ್ದರೆ ಹೋಗಲಿ ನನಗೆ ಅಡ್ಡಿ ಬರಬೇಡ' ಎಂದು ಹೇಳಿದನು. ಅವನ ಜೊತೆಯವನು ಅಂಥ ಹಿರಿಯ ಸೇವೆಯಲ್ಲಿ, ಅಂಥ ಹಿರಿಯ ಸುಖಕ್ಕೆ ಅವನ ಜೊತೆಯಲ್ಲಿಯೇ ಇರುವುದಾಗಿ ಹೇಳಿದನು. ಹೀಗೆ ಇಬ್ಬರೂ ನಿನ್ನವರಾಗಿ ತಮ್ಮ ಮನೆ ಮಠವನ್ನು ಬಿಟ್ಟು ನಿನ್ನನ್ನು ಹಿಂಬಾಲಿಸಿ ಬಂದು ತಮ್ಮ ಜೀವನ ಸೌಧವನ್ನು ಕಟ್ಟಿಕೊಳ್ಳು ತ್ತಿದ್ದರು.

"ಪಾಂಟಿಟಿಯಾನಸನು ನಮಗೆ ಈ ವಿಷಯವನ್ನು ಹೇಳಿದನು. ಅವನು ಈ ಮಾತನ್ನಾಡುತ್ತಿರುವಲ್ಲಿ ನೀನು ನನ್ನನ್ನು ಆತ್ಮಪರೀಕ್ಷೆಗೆ

ನಿಯಮಿಸಿದೆ. ನಾನು ನನ್ನ ಬದುಕನ್ನು ನೋಡಿಕೊಳ್ಳುವ ಇಷ್ಟವಿಲ್ಲದೆ ಅದನ್ನು ಹಿಂದಕ್ಕೆ ಇಟ್ಟುಕೊಂಡಿದ್ದೆನು. ನೀನು ಅದನ್ನು ನನ್ನ ಮುಂದಿಟ್ಟು ಆ ಬಾಳು ಎಷ್ಟು ವಿಕಾರವಾದದ್ದು ಮಲಿನವಾದದ್ದು ಎಷ್ಟು ಹುಣ್ಣುಗಳಿಂದ ನಾರುತ್ತಿದ್ದದ್ದು ಎಂಬುದನ್ನು ಕಾಣಿಸಿದೆ. ನಾನು ಕಂಡು ಗುಂಡಿಗೆ ಯೊಡೆದು ನಿಂತೆನು. ನನ್ನ ಹತ್ತೊಂಬತ್ತನೆಯ ವರುಷದಲ್ಲಿ ಸಿಸಿರೋ ಮಹನೀಯನ ಉಪನ್ಯಾಸವನ್ನು ನೋಡಿದಂದು ಜ್ಞಾನದಲ್ಲಿ ಆಸೆ ಹುಟ್ಟಿದ ಮೊದಲು ನಾನು ಹನ್ನೆರಡು ವರ್ಷಗಳನ್ನು ವ್ಯರ್ಥವಾಗಿ ಕಳೆದಿದ್ದೆನು. ಈಗಲೂ ಪ್ರಪಂಚದ ಸೌಖ್ಯವನ್ನು ಬಿಡುವುದೆನ್ನುವುದನ್ನು ಮುಂದಕ್ಕೆ ನೂಕುತ್ತಿದ್ದೆನು. ಜ್ಞಾನವನ್ನು ಪಡೆಯುವುದು ಹಾಗಿರಲಿ; ಅದನ್ನು ಹುಡುಕುವುದು ಕೂಡ ಕೈಸೇರಿಬಂದ ಪ್ರಪಂಚದ ಸಕಲೈಶ್ವರ್ಯಕ್ಕಿಂತ ರಾಜಪದವಿಗಿಂತ ಹಿರಿದು. ಇಂಥ ಜ್ಞಾನಕ್ಕೆ ಬಾಳನ್ನು ಕೊಡುವುದಕ್ಕೆ ನಾನು ಇನ್ನು ಕೆಲವು ಕಾಲ ಹೋಗಲಿ ಎನ್ನುತ್ತಿದ್ದೆನು. ಎಂಥ ಪಾಪಿ ನಾನು! ಚಿಕ್ಕಂದಿನಲ್ಲಿ ಇಂದ್ರಿಯನಿಗ್ರಹವನ್ನು ಬೇಡುವಲ್ಲಿ 'ಇಂದ್ರಿಯ ನಿಗ್ರಹವನ್ನೂ ಶೌಚವನ್ನೂ ಕೊಡು. ಆದರೆ ಈಗಲೇ ಬೇಡ' ಎಂದು ಹೇಳಿದೆನು. ನೀನು ಅದನ್ನು ಬೇಗನೆ ಕೊಟ್ಟುಬಿಟ್ಟೀಯೆ ಎಂದು ನನಗೆ ಹೆದರಿಕೆ.

"ನನ್ನ ಆತ್ಮಕ್ಕೆ ಶತ್ರುವಾಗಿ ಮಾಡಿಕೊಂಡಿದ್ದ ನನ್ನ ಮನಸ್ಸಿನಲ್ಲಿ ಉಂಟಾದ ಈ ಒಳತೋಟಿಯಿಂದ ದುಃಖಿತನಾಗಿ ಕಂಗೆಟ್ಟು ನಾನು ಆಲಿಪಿ ಯಿಸ್‌ನನ್ನು ಕುರಿತು, 'ಏನಯ್ಯಾ ಇದು? ನೀನು ಕೇಳಿದ ಮಾತೇನು? ವಿದ್ಯೆಯಿಲ್ಲದವರು ಎದ್ದುನಿಂತು ಸ್ವರ್ಗವನ್ನು ಕೈವಶ ಮಾಡಿಕೊಂಡರು. ವಿದ್ಯಾವಂತರಾದ ನಾವು ಧೈರ್ಯ ಸಾಲದಕಾರಣ ರಕ್ತ ಮಾಂಸಗಳಲ್ಲಿ ಬಿದ್ದು ಹೊರಳುತ್ತಿದೇವೆ. ಅವರು ಮುಂದಾದರೆಂದು ನಾಚಿ ನಾವು ಹಿಂದೆ ಉಳಿ ದಿದೇವೋ ಹೇಗೆ? ಅಂಥವರು ನಡೆದ ಕಡೆ ನಡೆಯಲಾರದೆ ಇರುವುದು ನಾಚಿಕೆಗೇಡಲ್ಲವೆ?' ಸುಮಾರು ಈ ಮಾತುಗಳನ್ನಾಡಿ ವ್ಯಾಕುಲತೆಯಿಂದ ನಾನು ಅವನನ್ನು ಬಿಟ್ಟು ಹೊರಟೆನು. ಅವನು ನನ್ನನ್ನು ಆಶ್ಚರ್ಯದಿಂದ ನೋಡಿ ಬಾಯಿ ತೆರೆಯದಿದ್ದನು. ನಮ್ಮ ವಾಸದ ಮನೆಗೆ ಒಂದು ಸಣ್ಣ ತೋಟವಿತ್ತು. ಮನೆಯಾತನು ಅಲ್ಲಿ ಇಲ್ಲದ್ದರಿಂದ ಮನೆ ತೋಟ ಎಲ್ಲವೂ

ನಮ್ಮ ಉಪಯೋಗದಲ್ಲೇ ಇತ್ತು. ನನ್ನ ಹೃದಯದ ಒಳಕದನವು ಮುಗಿಯುವವರೆಗೆ ಯಾರೂ ಬಳಿಗೆ ಬರದಂತೆ ಇರಲು ನನ್ನ ಕಾತರತೆ ನನ್ನನ್ನು ಅಲ್ಲಿಗೆ ದೂಡಿತು. ಆ ಒಳಕದನವು ಹೇಗೆ ಮುಗಿಯಬೇಕೆಂಬುದನ್ನು ನೀನು ತಿಳಿದಿದ್ದೆ; ನಾನು ತಿಳಿದಿರಲಿಲ್ಲ. ನಾನು ಹೀಗೆ ತೋಟದೊಳಕ್ಕೆ ಹೋಗಲು ಆಲಿಪಿಯುಸನು ನನ್ನೊಡನೆ ಬಂದನು. ಅವನಿದ್ದರೆ ನಾನು ಒಬ್ಬನೇ ಇದ್ದಂತೆಯೇ. ಅಲ್ಲದೆ ವ್ಯಾಕುಲಿತನಾದ ನನ್ನನ್ನು ಒಬ್ಬೊಂಟಿಗನಾಗಿ ಅವನು ಹೇಗೆ ಬಿಡಲಾದೀತು? ನಾವು ಮನೆಯಿಂದ ಸಾಧ್ಯವಾದಷ್ಟು ದೂರದಲ್ಲಿ ಕುಳಿತೆವು. ನನ್ನ ಆತ್ಮವು ಕ್ಷುಬ್ಧವಾಗಿತ್ತು. ನಿನ್ನ ಸೇವೆ ದೊಡ್ಡದೆಂದೂ ಅದನ್ನು ಕೈಗೊಳ್ಳಬೇಕೆಂದೂ ನನ್ನ ಮೂಳೆಮೂಳೆಯೂ ಮೊರೆದು ಮೊಳಗಿ ನನಗೆ ಹೇಳುತ್ತಿದ್ದರೂ ನಾನು ಇದಕ್ಕೆ ಒಪ್ಪಲಿಲ್ಲವಲ್ಲಾ ಎಂದು ನನಗೆ ನನ್ನ ಮೇಲೆಯೇ ಬಹಳ ಆಗ್ರಹವುಂಟಾಗಿತ್ತು.

"ನನ್ನ ಬಾಳಿನ ಒಳಗನ್ನೆಲ್ಲಾ ಶೋಧಿಸಿ ನನ್ನ ದುರವಸ್ಥೆ ಎಂಥದೆಂಬುದನ್ನು ನನ್ನ ಮನಸ್ಸು ಪರ್ಯಾಲೋಚನೆಯಿಂದ ತಿಳಿದಾಗ ನನ್ನ ಹೃದಯದಲ್ಲಿ ಉಗ್ರವಾದ ಒಂದು ಝಂಝಾ ಮಾರುತವು ಎದ್ದು ದೊಡ್ಡದೊಂದು ಮಳೆಯಂತೆ ಕಣ್ಣೀರನ್ನು ತಂದಿತು. ಧಾರಾಳವಾಗಿ ಈ ದುಃಖವನ್ನು ಹೊರಸೂಸುವುದಕ್ಕೆ ನಾನು ಆಲಿಪಿಯಿಸನನ್ನು ಬಿಟ್ಟು ಎದ್ದೆನು. ಅಳುವುದಕ್ಕೆ ಒಂಟಿಯಾಗಿರುವುದು ಮೇಲೆಂದು ತೋರಿತು. ಆದ್ದರಿಂದ ಅವನ ಸಾಮೀಪ್ಯವೂ ನನಗೆ ಅಡ್ಡಿಯಾಗದಂತೆ ನಾನು ಸ್ವಲ್ಪ ದೂರ ಹೋದೆನು. ಅಲ್ಲಿ ಒಂದು ಅಂಜೂರದ ಮರದ ಕೆಳಗೆ ಬಿದ್ದುಕೊಂಡು ನಾನು ಬೇಕಾದಷ್ಟು ಅತ್ತೆನು. ನಿನಗೆ ಒಪ್ಪುಗೆಯ ನಿವೇದನದಂತೆ ನನ್ನ ಕಣ್ಣೀರು ಪ್ರವಾಹವಾಗಿ ಹರಿಯಿತು. ಈ ಮಾತುಗಳನ್ನಲ್ಲದಿದ್ದರೂ ಈ ಅರ್ಥದ ಮಾತುಗಳನ್ನು ನಾನು ನಿನ್ನಲ್ಲಿ ಹೇಳಿಕೊಂಡೆನು. 'ದೇವ ಇನ್ನೆಷ್ಟುದಿನ ಈ ಕಷ್ಟಪಡಲಿ? ಎಷ್ಟು ದಿನ ಹೀಗೆ ನನ್ನ ವಿಷಯದಲ್ಲಿ ನೀನು ಕೋಪ ತೋರುವೆ? ಎಂದೆಂದಿಗೂ ಕೋಪಿಸುವೆಯಾ? ನನ್ನ ಹಿಂದಿನ ತಪ್ಪುಗಳನ್ನು ನೆನೆಯದಿರು.'

"ಹೀಗೆ ನಾನು ಪಶ್ಚಾತ್ತಾಪದಿಂದ ಕಣ್ಣೀರು ಸುರಿಸುತ್ತಾ ಮಾತನಾಡಿಕೊಳ್ಳುತ್ತಾ ಇರಲು ಪಕ್ಕದ ಮನೆಯಿಂದ ಯಾರೋ ಹುಡುಗನೋ

ಹುಡುಗಿಯೋ ಮರಳಿ ಮರಳಿ ಹಾಡುವಂತೆ ಈ ಮಾತು ನನಗೆ ಕೇಳಿಸಿತು. 'ಕೈಗೆ ತೆಗೆದುಕೊ ಓದು, ಕೈಗೆ ತೆಗೆದುಕೊ ಓದು,' ಒಡನೆಯೇ ನನ್ನ ಸ್ಥಿತಿ ಮಾರ್ಪಟ್ಟಿತು. ಯಾವುದಾದರೂ ಆಟದಲ್ಲಿ ಮಕ್ಕಳು ಈ ಮಾತು ಗಳನ್ನು ಹೇಳುವುದುಂಟೇ ಎಂದು ಜ್ಞಾಪಕ ಮಾಡಿಕೊಳ್ಳುವುದಕ್ಕೆ ಯತ್ನ ಮಾಡಿದೆನು. ಎಂದೂ ಇಂಥ ಮಾತುಗಳನ್ನು ಕೇಳಿದ ನೆನಪು ನನಗೆ ಬರಲಿಲ್ಲ. ನಾನು ಕಣ್ಣೀರ ಪ್ರವಾಹವನ್ನು ತಡೆದುಕೊಂಡು ಎದ್ದೆನು. ನಾನು ಕೇಳಿದ ಈ ಮಾತುಗಳು ವೇದವನ್ನು ತೆರೆದು ಮೊದಲು ಸಿಕ್ಕುವ ಮಾತನ್ನು ಓದ ಬೇಕು ಎಂದು ದೇವರು ಮಾಡಿದ ಆಜ್ಞೆಯಲ್ಲದೆ ಅನ್ಯಥಾ ಅಲ್ಲವೆಂದು ಭಾವಿಸಿದೆನು. ಆಂಟೋನಿಯು ಯಾರೋ ವೇದ ಓದುವವೇಳೆಯಲ್ಲಿ ಬಂದು ಆಗ ಓದುತ್ತಿದ್ದ ಮಾತುಗಳು ತನಗೆ ಅನ್ವಯವಾದವೆಂದು ಗ್ರಹಿಸಿ ಉಪದಿಷ್ಟನಾದದ್ದನ್ನು ನಾನು ಕೇಳಿದ್ದೆನು. ಆ ಉಪದೇಶದಿಂದ ಆತನು ನಿನ್ನವನಾದನು. ಆದಕಾರಣ ನಾನು ನನ್ನ ಪುಸ್ತಕವನ್ನಿಟ್ಟಿದ್ದ ಆಲಿಪಿ ಯಸನು ಕುಳಿತಿದ್ದ ಸ್ಥಳಕ್ಕೆ ಅವಸರದಿಂದ ಬಂದೆನು. ಗ್ರಂಥವನ್ನು ಹಿಡಿದೆತ್ತಿ ತೆರೆದು ಒಂದು ಮಾತನ್ನೂ ಆಡದೆ ನನ್ನ ಕಣ್ಣಿಗೆ ಮೊದಲು ಕಂಡ ಭಾಗವನ್ನು ಓದಿದೆನು. ಅಲ್ಲಿ ಈ ಮಾತು: 'ಕುಡಿಯುವುದರಲ್ಲಿಲ್ಲ, ಕುಣಿದಾಟದಲ್ಲಿಲ್ಲ; ಕೋಣೆಯಲ್ಲಿ ಸೇರಿ ಕೂಡುವುದರಲ್ಲಿಲ್ಲ. ಗುರುದೇವ ಯೇಸೂ ಕ್ರಿಸ್ತನ ಮೇಲೆ ಭಾರಹಾಕಿ; ದೇಹಕ್ಕಾಗಿ ಬಹಳ ಚಿಂತಿಸ ಬೇಡಿ.' ನಾನು ಮುಂದಕ್ಕೆ ಓದಲೆಳಸಲಿಲ್ಲ. ಓದಬೇಕಾಗಿಯೂ ಇರಲಿಲ್ಲ. ಏಕೆಂದರೆ ಈ ವಾಕ್ಯವನ್ನು ಮುಗಿಸಿದ ಒಡನೆ ಹೃದಯಕ್ಕೆ ಶಾಂತಿಯ ದೀಪವೊಂದು ಬಂದಿತೆಂಬಂತೆ ನನ್ನಲ್ಲಿದ್ದ ಸಂದೇಹದ ಕತ್ತಲು ಹರಿದು ಹೋಯಿತು.

"ಆಮೇಲೆ ನಾವು ನಮ್ಮ ತಾಯ ಬಳಿಗೆ ಹೋಗಿ ಈ ಮಾತನ್ನು ಹೇಳಿದೆವು. ಆಕೆ ಆನಂದಿಸಿದಳು. ನಡೆದದ್ದನ್ನು ಪಾಙ್ರವಾಗಿ ನಾವು ಹೇಳಲು ಆಕೆ ಉತ್ಸಾಹದಿಂದ ಉಬ್ಬಿ ನಾವು ಕೇಳುವುದಕ್ಕಿಂತ ಹೆಚ್ಚಾಗಿ ಕೊಡುವೆಯೆಂದು ನಿನ್ನನ್ನು ಸ್ತೋತ್ರಮಾಡಿದಳು."

ಅಗಸ್ಟೀನನು ತನ್ನ ಮನಸ್ಸಿನ ಸ್ಥಿತಿಯನ್ನು ತನ್ನ ತಾಯಿಗೆ ಹೇಳಿದನು. ತನ್ನ ಆಸೆಯೆಲ್ಲ ಕೈಸೇರಿತೆಂದು ಆಕೆ ಆನಂದಪಟ್ಟಳು. ಆಮೇಲೆ ತಾನು

ಊರಿಗೆ ಹೋಗಬೇಕೆಂದು ಅಪೇಕ್ಷಿಸಿದಳು. ಊರಿಗೆ ಹೋಗುತ್ತಾ ದಾರಿಯಲ್ಲಿ ತೀರಿಹೋದಳು.

"ನಮ್ಮ ತಾಯಿ ಹೇಳಿದಳು, 'ಮಗು, ಇನ್ನು ಈ ಬಾಳಿನಲ್ಲಿ ನನಗೆ ಬೇಕಾದದ್ದೇನೂ ಇಲ್ಲ. ನನ್ನ ಆಸೆ ಸಂದಮೇಲೆ ನಾನು ಇಲ್ಲಿರುವುದೇಕೋ ಕಾಣೆ. ನಾನು ಮಾಡುವುದೇನೂ ಇಲ್ಲ. ಸಾಯುವ ಮೊದಲು ನೀನು ಕ್ಯಾಥೊಲಿಕ್ ಕ್ರೈಸ್ತನಾಗುವ ಒಂದು ಸಂತೋಷವನ್ನು ನೋಡಬೇಕೆಂದು ಆಶಿಸಿದ್ದೆನು. ದೇವರು ಇದನ್ನು ನಾನು ಬೇಡಿದ್ದಕ್ಕಿಂತ ಹೆಚ್ಚಾಗಿ ಕೊಟ್ಟನು. ನೀನು ಇಹದ ಸೌಖ್ಯವನ್ನೇ ನಿರಾಕರಿಸಿದೆ, ದೇವರ ಸೇವಕನಾದೆ. ನಾನಿಲ್ಲಿ ಇನ್ನೇಕೆ ಇರಲಿ?' ಇದಕ್ಕೆ ನಾನು ಏನು ಉತ್ತರ ಹೇಳಿದೆನೋ ಜ್ಞಾಪಕವಿಲ್ಲ. ಇದಾದ ಐದು ದಿವಸದಮೇಲೆ ಇರಬಹುದು. ಒಂದು ದಿನ ಆಕೆಗೆ ಜ್ವರ ಬಂದಿತು. ಅದರಲ್ಲಿ ಒಂದು ದಿನ ಸನ್ನಿ ಬಂದು ಆಕೆ ನಮ್ಮ ಪ್ರಪಂಚದಿಂದ ಮರೆಯಾದಳು. ನಾವು ಹೆದರಿ ಅವಳ ಸುತ್ತ ನಿಂತೆವು. ಆದರೆ ಸ್ವಲ್ಪದರಲ್ಲೇ ಆಕೆ ಎಚ್ಚರಗೊಂಡಳು. ನಾನೂ ನನ್ನ ತಮ್ಮನೂ ಬಳಿಯಲ್ಲಿರುವುದನ್ನು ನೋಡಿ 'ನಾನು ಎಲ್ಲಿದ್ದೆ' ಎಂದು ಕೇಳಿದಳು. ದುಃಖದಿಂದ ನೀರವವಾಗಿ ನಿಂತಿದ್ದ ನಮ್ಮನ್ನು ದಿಟ್ಟಿಸಿ ನೋಡಿ, 'ನಿಮ್ಮ ತಾಯನ್ನು ನೀವು ಇಲ್ಲಿಯೇ ಭೂಮಿಯಲ್ಲಿಡಿರಿ' ಎಂದು ಹೇಳಿದಳು. ನಾನು ಅಳುವುದನ್ನು ತಡೆದುಕೊಂಡೆನು, ಸುಮ್ಮನಿದ್ದೆನು. ನನ್ನ ತಮ್ಮನು ಅವಳಿಗೆ ಈ ಪರಸೀಮೆಯಲ್ಲಿ ಸಾಯುವುದಕ್ಕಿಂತ ತನ್ನ ಸೀಮೆಯಲ್ಲಿ ಸಾಯುವುದು ಮನಸ್ಸಿಗೆ ಹಿತವಾಗಿರಬಹುದೆಂದು ಎರಡು ಮಾತನ್ನು ಹೇಳಿದನು. 'ಇವನ ಮಾತನ್ನು ಕೇಳು' ಎಂದು ಹೇಳಿ ನನ್ನ ತಾಯಿ, 'ಈ ದೇಹವನ್ನು ಎಲ್ಲಿಯಾದರೂ ಇಡಿ. ಇದಕ್ಕಾಗಿ ನೀವು ಯೋಚನೆ ಮಾಡಬೇಡಿ. ಇಷ್ಟುಮಾತ್ರ ನಾನು ನಿಮ್ಮನ್ನು ಕೇಳಿಕೊಳ್ಳುತ್ತೇನೆ. ನೀವು ಎಲ್ಲಿದ್ದರೂ ಸರಿಯೆ ದೇವರ ಸಾನ್ನಿಧ್ಯದಲ್ಲಿ ನನ್ನನ್ನು ನೆನೆದುಕೊಳ್ಳಿರಿ' ಎಂದು ನಮ್ಮಿಬ್ಬರಿಗೂ ಹೇಳಿದಳು. ಓಸ್ಟಿಯಾದಲ್ಲಿದ್ದಾಗ ನನ್ನ ಮಿತ್ರರು 'ನಿನ್ನ ದೇಶದಿಂದ ಇಷ್ಟು ದೂರದಲ್ಲಿ ದೇಹವನ್ನು ಬಿಡುವುದಕ್ಕೆ ನಿನಗೆ ಭಯವಿಲ್ಲವೇ?' ಎಂದು ಕೇಳಿದರಂತೆ. ಆಕೆ 'ದೇವರಿಗೆ ದೂರವೆನ್ನುವುದಿಲ್ಲ. ಮುಕ್ತಿಯ ಕಾಲದಲ್ಲಿ ನನ್ನನ್ನು ಉದ್ಧರಿಸುವುದಕ್ಕೆ ಎಲ್ಲಿ ನೋಡ

ಬೇಕೆಂದು ಅವನಿಗೆ ತಿಳಿಯದೆ ಹೋಗುವುದಿಲ್ಲ' ಎಂದಿದ್ದಳಂತೆ. ಇದು ಆಮೇಲೆ ನನಗೆ ತಿಳಿಯಿತು. ಹೀಗೆ ಅವಳಿಗೆ ಜ್ವರ ಬಂದ ಒಂಬತ್ತನೆಯ ದಿನ ಆಕೆಯ ಐವತ್ತಾರನೆಯ ವಯಸ್ಸಿನಲ್ಲಿ ನನಗೆ ಮೂವತ್ತಮೂರು ವರುಷವಾಗಿದ್ದಾಗ ಆ ಪವಿತ್ರಾತ್ಮಳು ದೇಹದಿಂದ ಬಿಡುಗಡೆಯನ್ನು ಹೊಂದಿದಳು.''

ಈ ಸಂದರ್ಭವನ್ನು ವರ್ಣಿಸುತ್ತಾ ಅಗಸ್ಟೀನನು ತಾಯ ವಿಷಯದಲ್ಲಿ ತನಗಿದ್ದ ಅಸಾಧಾರಣ ಪ್ರೇಮವನ್ನೂ ಭಕ್ತಿ ಕೃತಜ್ಞತೆಯನ್ನೂ ವ್ಯಕ್ತಪಡಿಸಿದ್ದಾನೆ.

"ನಾನು ಅವಳ ಕಣ್ಣನ್ನು ಮುಚ್ಚಿದೆನು. ನನ್ನ ಹೃದಯದಲ್ಲಿ ಶೋಕ ಉಬ್ಬೇರಿ, ನನ್ನ ಕಣ್ಣುಗಳಲ್ಲಿ ನೀರು ಪ್ರವಾಹವಾಗಿ ಬರುವಂತಾಯಿತು. ಮನಸ್ಸನ್ನು ದೃಢಮಾಡಿಕೊಂಡು ಆ ನೀರನ್ನು ನಾನು ಕಣ್ಣಿನಲ್ಲೇ ನಿಲ್ಲಿಸಿಕೊಂಡೆನು. ಇದರ ಕಷ್ಟವನ್ನು ನಾನು ಹೇಗೆ ಹೇಳಲಿ? ಅವಳು ತೀರಿಹೋದಳೆಂದೊಡನೆ ನನ್ನ ಮಗ ಎಡಿಯೊಡೇಟಸನು ಗಟ್ಟಿಯಾಗಿ ಅಳತೊಡಗಿದನು ; ನಾವೆಲ್ಲ ಗದರಿಸಲು ಸುಮ್ಮನಾದನು. ಹೀಗೆಯೇ ನನ್ನಲ್ಲಿಯೂ ಮಗುವಿನ ರೀತಿಯಲ್ಲಿ ಮರುಗುತ್ತಿದ್ದ ಸ್ವಲ್ಪ ದುಃಖವೂ ಶಾಂತವಾಯಿತು. ಆಕೆಯ ಸಾವಿನಲ್ಲಿ ಅಳುವುದೂ ಕಣ್ಣೀರು ಸುರಿಸುವುದೂ ತಕ್ಕುದಲ್ಲವೆಂದು ನಮಗೆ ತೋರಿತು. ಮೃತರಾದವರಿಗಾಗಿ ಹೀಗೆ ದುಃಖಿಸುವುದಕ್ಕೆ ಕಾರಣ ಅವರು ಅಸುಖಿಗಳಾದರೆಂಬ ಭಾವನೆ ಅಥವಾ ತೀರ ಇಲ್ಲದೆ ಹೋದರೆಂಬ ಭಾವನೆ. ಈಕೆಯೋ ಸಾವಿನಿಂದ ಅಸುಖಿಯಾಗಲಿಲ್ಲ; ತೀರ ಇಲ್ಲದೆ ಹೋಗಲೂ ಇಲ್ಲ. ಇದರ ವಿಷಯದಲ್ಲಿ ನಮಗೆ ಧೈರ್ಯವುಂಟು. ಆಕೆ ಆಡಿದ್ದ ಮಾತುಗಳು ಅಂಥವು. ಅವಳ ಅಕೃತ್ರಿಮವಾದ ನಂಬಿಕೆ ಅಂಥದು.

"ಆಕೆಯ ಆತ್ಮವು ಆಕೆಯ ಪತಿಯ ಆತ್ಮದೊಂದಿಗೆ ಶಾಂತಿಯಲ್ಲಿರಲಿ. ಹೇ ದೇವ, ನಾನು ಈ ಕೃತಿಗಳಿಂದ ನನ್ನ ಮನಸ್ಸಿನಿಂದ ಈ ಕೈಗಳಿಂದ ಸೇವೆ ಮಾಡುತ್ತಿರುವ ನನ್ನ ಸಹೋದರರಾದ ನಿನ್ನ ಸೇವಕರಿಗೂ ನನ್ನ ಹಿರಿಯರಾದ ನಿನ್ನ ಪುತ್ರರಿಗೂ ಈ ಬುದ್ಧಿಯನ್ನು ಕೊಡು. ಈ ಪುಸ್ತಕವನ್ನು ಓದುವವರೆಲ್ಲ ನಿನ್ನ ಸನ್ನಿಧಿಯಲ್ಲಿ ನನ್ನನ್ನು ಹೆತ್ತ ನಿನ್ನ ಪರಿಚಾರಿಕೆ

ಯಾದ ಆ ಮಾನಿಕಳನ್ನೂ ಅವಳ ಪತಿಯಾದ ಪ್ಯಾಟ್ರಿಯಸನನ್ನೂ ನೆನೆಯಲಿ."

೩

ಈ ಪುಸ್ತಕವನ್ನು ಓದಿದಾಗ ಮೊದಲು ನನ್ನ ಮನಸ್ಸಿಗೆ ಬಹಳವಾಗಿ ರುಚಿಸಿದ್ದು ಈ ತಾಯಿ ಮಕ್ಕಳ ಸಂಬಂಧದ ಚಿತ್ರ. ಈ ತಾಯಿ ನಮ್ಮ ಸೀಮೆಯ ತಾಯಿ ಒಬ್ಬಳು, ನನ್ನ ತಾಯಿ ಎಂಬಂತೆ ತೋರಿತು. ಈ ಮಗನು ನಾವು ನೋಡಿರುವ ಹಲವರು ಮಕ್ಕಳಂತೆ ನನ್ನಂತೆ ಕಂಡನು. ಇದಾದಮೇಲೆ ಇದರಲ್ಲಿ ನನಗೆ ಬಹಳ ಮೆಚ್ಚಿಕೆಯಾದದ್ದು ಈ ಜೀವನದ ಚಿತ್ರ; ಅದನ್ನು ರಚಿಸಿರುವ ಕೌಶಲ. ಇಷ್ಟು ಸುಂದರವಾದ ರೀತಿಯಿಂದ ಹೇಳಿರುವ ವಿಷಯವೋ ನಮ್ಮ ಭಕ್ತರು ಹೇಳಿರುವ ಸೂಕ್ತಿಗಳಂತೆ ಇದೆ. ಈ ಕಾರಣದಿಂದ ಉಪನ್ಯಾಸದಲ್ಲಿ ಈತನು ಬದುಕಿಕೊಳ್ಳುವುದಕ್ಕೆ ಅವನ ತಾಯಿ ಹೇಗೆ ಕಾರಣಳಾದಳೆಂಬುದನ್ನೂ, ಅವನ ಮನಸ್ಸು ದೇವರಕಡೆಗೆ ತಿರುಗಿದ್ದು ಹೇಗೆ ಎಂಬುದನ್ನೂ ತೋರಿಸುವ ಮಾತುಗಳನ್ನು ಮಾತ್ರ ಉದ್ಧರಿಸಿ ಬರೆದಿದೆ. ಬಿನ್ನಪದಲ್ಲಿ ಈ ಮಾತುಗಳಲ್ಲದೆ ಇವನ ಪ್ರಪಂಚ ಜ್ಞಾನವನ್ನೂ ತತ್ತ್ವಜ್ಞಾನವನ್ನೂ ಭಗವದ್ಭಕ್ತಿಯನ್ನೂ ಪ್ರಕಟಿಸುವ ಅಮೂಲ್ಯ ವಾಕ್ಯಗಳು ಅನೇಕ ಇವೆ. ಮಾತೃಭಾಷೆಯಲ್ಲಿ ವಿಷಯ ಗಳನ್ನು ಕಲಿಯಬೇಕು ಎಂದೂ ಕಾವ್ಯವು ಶುದ್ಧ ವಿಷಯಗಳನ್ನು ವರ್ಣಿಸ ಬೇಕು ಅಶುದ್ಧ ಪ್ರವೃತ್ತಿಗಳನ್ನು ಉದ್ರೇಕಗೊಳಿಸುವಂತಿರಬಾರದು ಎಂದೂ ಇನ್ನೂ ಇಂಥ ಹತ್ತಾರು ವಿಷಯವನ್ನೂ ಈತನು ಹೇಳಿದಾನೆ. ಉಪನ್ಯಾಸ ಬಹಳ ದೊಡ್ಡದಾದೀತೆಂಬ ಭೀತಿಯಿಂದಲೂ ನಮಗೆ ಈ ಚರಿತ್ರೆಯಲ್ಲಿ ಮಾತ್ರ ಕಾಣತಕ್ಕ ವಿಷಯವಲ್ಲದ್ದರಿಂದಲೂ ಇಂಥ ವಿಷಯಗಳನ್ನು ಇಲ್ಲಿ ಎತ್ತಿ ಬರೆದಿಲ್ಲ. ಈ ಚರಿತ್ರೆ ನಮಗೆ ಅವಶ್ಯಕ ಗ್ರಂಥವಾಗುವುದಕ್ಕೆ ಕಾರಣಗಳು ಬೇರೆ. ಅಗಸ್ಟೀನನಂತೆ ತಪ್ಪಿನ ಕೆಸರಿನಲ್ಲಿ ನಡೆದು ಒಳ್ಳೆಯ ದಾರಿಗೆ ಬಂದ ಜನರು ಈವರೆಗೆ ಅನೇಕರು ಇದ್ದಿರಬೇಕು; ಈಗಲೂ ಇನ್ನುಮುಂದೂ ಇರುವರು. ಆದರೆ ಈತನಂತೆ ಸಂಕೋಚವನ್ನು ಬಿಟ್ಟು ತನ್ನ ಚರಿತ್ರೆಯನ್ನು ಕೇಳಿ ಇತರರು ಬದುಕಲಿ ಎಂಬ ಉದ್ದೇಶದಿಂದ ಆ ಬಾಳನ್ನು ಬರೆದಿಟ್ಟವರು ಅಪೂರ್ವ. ಇಂಥವರು ಭಕ್ತಿಪಂಥಗಳಲ್ಲಿ ಮಾತ್ರ ಅಲ್ಲಲ್ಲಿ ಒಬ್ಬೊಬ್ಬರು

ಕಾಣುವರು. ಹೀಗೆ ಬರೆಯುವವರು ತಪ್ಪು ದಾರಿಯನ್ನು ಖಂಡಿತವಾಗಿಯೂ ಬಿಟ್ಟು ಜನರ ಮನ್ನಣೆ ಮಾತ್ರದಿಂದ ಪ್ರಯೋಜನವೇನನ್ನೂ ಕಾಣದ ಮುಕ್ತಾವಸ್ಥೆಗೆ ಬಂದಿರಬೇಕು. ಮಹಾತ್ಮಾ ಗಾಂಧಿಯವರ ಜೀವನ ವನ್ನೂ ಜೀವನ ಚರಿತೆಯನ್ನೂ ಕುರಿತು ಯೋಚಿಸಿದರೆ ಇದು ಹೇಗೆಂದು ಅರ್ಥವಾಗುತ್ತದೆ. ತನ್ನ ತಪ್ಪುಗಳ ಒಪ್ಪುಗೆಯನ್ನು ನೋಡಿ ಯಾರಾದರೂ ಹೀಯಾಳಿಸಬಹುದೆಂದು ಅಗಸ್ಟೀನನು ಹೀಗೆಂದು ಹೇಳಿದಾನೆ.

"ಅಹಂಕಾರಿಗಳಾಗಿರುವವರು, ತಮ್ಮ ಆತ್ಮದ ಶುಭಕ್ಕಾಗಿ ನಿನ್ನಿಂದ ಪೆಟ್ಟುತಿಂದು ಬೀಳದೆ ಇರತಕ್ಕಂಥವರು, ನನ್ನನ್ನು ಅಪಹಾಸ್ಯ ಮಾಡುವು ದಾದರೆ ಮಾಡಲಿ. ಆದರೂ ನಾನು ನಿನ್ನ ಸ್ತುತಿ ಮಾಡುತ್ತ ನನ್ನ ತಪ್ಪನ್ನು ಒಪ್ಪಿಕೊಳ್ಳುತ್ತೇನೆ. ಆ ಕಾಲದಲ್ಲಿ ನಾನು ಅಲೆದಾಡಿದ್ದನ್ನು ಈಗ ನೆನೆಯುವುದಕ್ಕೆ ನನಗೆ ಅಪ್ಪಣೆಕೊಡು, ನನಗೆ ಯೋಗ್ಯತೆಯನ್ನು ಕೊಡು. ನಿನ್ನ ಸಾನ್ನಿಧ್ಯದಲ್ಲಿ ವಂದನೆಯನ್ನರ್ಪಿಸುವ ಯಾಗವನ್ನು ಮಾಡಿಸು. ನೀನಿಲ್ಲದಿರಲು ನಾನೇ ನನಗೆ ಪತನಕ್ಕಲ್ಲದೆ ಮತ್ತೆ ಯಾವುದಕ್ಕೆ ಕಾರಣನಾದೇನು? ಎಷ್ಟು ಹೇಳಿದರೂ ನಾನು ನೀನು ಕೊಡುವ ಹಾಲನ್ನು ಕುಡಿಯುವ ನಿನ್ನಿಂದ ಪುಷ್ಟವಾಗುವ ಅಮೃತಶಿಶುವಲ್ಲದೆ ಬೇರೆಯೇನಾ ದೇನು? ಯಾವ ಮನುಷ್ಯನೇ ಆಗಲಿ ಮನುಷ್ಯಮಾತ್ರದವನಾಗಿ ಎಷ್ಟು ಹಿರಿಯನಾದಾನು? ಶಕ್ತರೂ ಬಲಶಾಲಿಗಳೂ ನಮ್ಮನ್ನು ನೋಡಿ ನಗಲಿ. ದೀನರೂ ರಿಕ್ತರೂ ಆದ ನಾವು ನಿನ್ನಲ್ಲಿ ತಪ್ಪುಗಳನ್ನೊಪ್ಪಿ ಕೊಳ್ಳುವೆವು.

"ತಪ್ಪು ಮಾಡಿದವರಿಗೆ ಭಯಬೇಡ. ಮಾಡದವರಿಗೆ ಹೆಮ್ಮೆ ಬೇಡ. ನಾನು ತಪ್ಪು ಏನನ್ನಾದರೂ ಮಾಡದೆ ಇದ್ದಲ್ಲಿ ಅದು ನಿನ್ನ ಕೃಪೆಯಿಂದ ಸಿದ್ಧಿಸಿದ್ದೆಂದು ನಾನು ಬಗೆಯುತ್ತೇನೆ. ತನ್ನ ಯೋಗ್ಯತೆಯೆಷ್ಟೆಂಬು ದನ್ನು ತಿಳಿದ ಯಾವನು ತಾನೆ ತಾನು ಒಳ್ಳೆಯ ದಾರಿಯಲ್ಲಿ ನಡೆದದ್ದು ತನ್ನ ಶಕ್ತಿಯಿಂದ ಎಂದು ಹೇಳುವನು? ತನಗೆ ನಿನ್ನ ಕರುಣೆಯ ಆವಶ್ಯಕತೆಯಿಲ್ಲ, ಆದ್ದರಿಂದ ನಿನ್ನಲ್ಲಿ ಭಕ್ತಿ ತೋರಬೇಕಾದದ್ದಿಲ್ಲ, ನೀನು ಕ್ಷಮಿಸಬೇಕಾದ ಪಾಪ ತನ್ನಲ್ಲಿಲ್ಲ, ಎಂಬಂತೆ ಭಾವಿಸುವನು? ನೀನು ಕೂಗಲಾಗಿ ನಿನ್ನ ಮಾತನ್ನು ಕೇಳಿ ನಾನು ಈಗ ನೆನೆದು ಒಪ್ಪಿಕೊಳ್ಳುತ್ತಿರುವಂಥ ತಪ್ಪು

ಗಳನ್ನು ಮಾಡದೆ ಯಾವನು ಬದುಕಿದಾನೋ ಅವನು ನನ್ನ ವಿಷಯದಲ್ಲಿ ತಿರಸ್ಕಾರಭಾವವನ್ನು ತೋರಲಾಗದು. ರೋಗಿಯಾದ ನನ್ನನ್ನು ವಾಸಿ ಮಾಡಿದ ವೈದ್ಯನಿಂದಲೇ ಅವನು ರೋಗಿಯಾಗದಂತೆ ರಕ್ಷಿಸಲ್ಪಟ್ಟಿದ್ದಾನೆ. ಈ ಕಾರಣದಿಂದ ಅವನು ನಿನ್ನಲ್ಲಿ, ನಾನು ತೋರಿಸುವಷ್ಟೇ ಅಲ್ಲ, ನನಗಿಂತ ಹೆಚ್ಚಿನ ಭಕ್ತಿಯನ್ನು ತೋರಿಸಬೇಕು. ಏಕೆಂದರೆ ಪಾಪದಿಂದ ನಷ್ಟವಾಗ ದಂತೆ ನನ್ನನ್ನು ಉಳಿಸಿಕೊಂಡ ಅದೇ ದೈವವೇ ಅವನನ್ನು ಆ ಪಾಪಕ್ಕೆ ಬೀಳದಂತೆ ಕಾಪಾಡಿದೆ.''

ಈ ಮಾತೆಲ್ಲಾ ಚಿನ್ನದಂಥ ಮಾತು. ಹೇಗೋ ಏನೋ ಎಂದು ಶಂಕೆಯಲ್ಲಿರುವ ಜೀವನಗಳಿಗೆ ದೀಪದಂಡವಾಗಿ ಮುಂದೆನಿಂತು ಬದುಕುವ ದಾರಿಯನ್ನು ತೋರಿಸುವ ಮಾತು. ಮನುಷ್ಯನ ಜೀವನದ ಸಂಸ್ಕಾರದಲ್ಲಿ ಜಡ ಕ್ಷುಬ್ಧ ಶಾಂತ ಎನ್ನಬಹುದಾದ ಮೂರು ಅವಸ್ಥೆಗಳುಂಟು. ವಿಚಾರ ಹೀನವಾಗಿ ಬಾಳನ್ನು ನಡೆಯಿಸುತ್ತ ಸುಮ್ಮನೆ ಬಾಳುವುದು ಮೊದಲನೆಯ ಅವಸ್ಥೆ. ಇಲ್ಲಿ ಕಷ್ಟಗಳೆಂಬುವು ಉಂಟು, ಸುಖಗಳೆಂಬುವು ಉಂಟು. ಇದು ಸಾಮಾನ್ಯವಾಗಿ ಎಲ್ಲಾ ಚೇತನಗಳ ಅವಸ್ಥೆ. ವಿಚಾರಮಾಡಿ ನೋಡಿ ಮೇಲೆಬೀಳುತ್ತಿರುವ ಈ ಕಷ್ಟ ಸುಖಗಳ ಗೊಂದಲದಿಂದ ಬಿಡುಗಡೆ ಹೊಂದುವುದು ಹೇಗೆ ಎಂದು ತೊಳಲುವುದು ಎರಡನೆಯ ಅವಸ್ಥೆ. ಇಲ್ಲಿ ಕಷ್ಟ ಸುಖಗಳ ವಿವೇಚನೆಯಿಲ್ಲ. ಎರಡನ್ನೂ ಮೀರುವುದರಲ್ಲಿ ಅಪೇಕ್ಷೆ. ಇದು ಬರುವುದು ಲಕ್ಷದಲ್ಲಿ ಒಬ್ಬರಿಗೆ. ಕಷ್ಟ ಸುಖ ಎರಡನ್ನೂ ಮೀರಿ ನಿಲ್ಲುವುದು ಮೂರನೆಯ ಅವಸ್ಥೆ. ಇದೇ ಶಾಂತಿ. ಯತ್ನಮಾಡುವ ಸಾವಿರ ಜನದಲ್ಲಿ ಒಬ್ಬನಿಗೆ ಈ ಅವಸ್ಥೆ ಕೈಸೇರುತ್ತದಂತೆ. ಇದನ್ನು ಪಡೆ ದವರು ಇಲ್ಲ ಜ್ಞಾನಿಗಳಾಗಿ ಆತ್ಮಾವಲಂಬಿಗಳಾಗಿ ಇರುತ್ತಾರೆ, ಇಲ್ಲ ಭಕ್ತರಾಗಿ ಪರಮಾತ್ಮಾವಲಂಬಿಗಳಾಗಿರುತ್ತಾರೆ. ಎರಡು ಸಂದರ್ಭದ ಅವಲಂಬವೂ ಮೂಲದಲ್ಲಿ ಒಂದೇ. ಜ್ಞಾನದ ದಾರಿ ಕಷ್ಟ; ಅದರಲ್ಲಿ ನಡೆಯುವುದಕ್ಕೆ ಶಕ್ತಿಯಿರಬೇಕು. ಭಕ್ತಿಯ ದಾರಿ ಬಹಳ ಸುಲಭ ವಲ್ಲ; ಆದರೆ ಅದಕ್ಕಿಂತ ಸ್ವಲ್ಪ ಸುಲಭ. ಸಾಕ್ರಟೀಸ್ ಎಪಿಕ್ಟಿಟಸ್ ಮಾರ್ಕಸ್ ಆರೀಲಿಯಸ್ ಇವರ ದಾರಿ ಜ್ಞಾನದ ದಾರಿ. ಡೇವಿಡ್ ಅಗಸ್ಟೀ ನರದು ಭಕ್ತಿಯ ದಾರಿ. ಜ್ಞಾನದ ಸ್ಥಿತಿಗೆ ಬರುವ ದಾರಿ ಯಾವುದೆಂದು

ಹಲವರು ಹೇಳಿದಾರೆ. ಭಕ್ತಿಯ ಸ್ಥಿತಿಗೆ ಬರುವ ದಾರಿಯನ್ನು ವರ್ಣಿಸಿರುವರು ಅಪೂರ್ವ. ತನ್ನ ಜೀವನದ ವಿವರವಾದ ವರ್ಣನೆಯಿಂದ ಅಗಸ್ಟೀನ್ ಸಾಧುವು ಈ ಅಪೂರ್ವವಾದ ಸೇವೆಯನ್ನು ಸಲಿಸಿ ಲೋಕವನ್ನು ಋಣಿಯಾಗಿ ಮಾಡಿದಾನೆ.



2-33 ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ